# ಮೊದಲ ಮಾತು

ನನ್ನ ಗೆಳೆಯರೂ ಹಿತೈಷಿಗಳೂ ಈ "ಬೃಂದಾವನ"ವೆಂಬ ಕವನ ಸಂಗ್ರಹವನ್ನು ಪ್ರಕಾಶಕ್ಕೆ ತರುವ ಹೊಣೆಯನ್ನು ಹೊತ್ತಿರುತ್ತಾರೆ. ೧೯೨೬ ರಿಂದ ಇದುವರೆಗೆ ಬರೆದಿರುವ ಕವನಗಳಿಂದ ಆಯ್ದು ತೆಗೆದುವು ಇವು. ಉತ್ಸಾಹಶಾಲಿಗಳಾದ ನಮ್ಮ ಮಿತ್ರರು "ಶ್ರೀ ಕಾವೇರಿ ಪ್ರಕಟನಾಲಯ"ವನ್ನು ಸ್ಥಾಪಿಸಿ ಅದರ ಮುಖೇನ "ಶ್ರೀ ಕಾವೇರಿ ಸಾಹಿತ್ಯ ಮಾಲೆ" ಯನ್ನಾರಂಭಿಸಿರುವುದು ಪ್ರಶಂಸನೀಯವಾಗಿದೆ. ಆ ನೂತನ ಸಾಹಿತ್ಯಮಾಲೆಯ ಮೊದಲನೆಯ ಕುಸುಮ್ಮವಾಗಿ ಈ "ಬೃಂದಾವನ"ವನ್ನು ಆರಿಸಿದುದ್ದಕ್ಕಾಗಿ ಪ್ರಕಟನ ಕರ್ತರಿಗೂ, ಸಂಪಾದಕರಿಗೂ ನಾನು ತುಂಬ ಕೃತಜ್ಞನಾಗಿದ್ದೇನೆ.

ಇದರೊಳಗಿನ ಅನೇಕ ಕವನಗಳು ಈಗಾಗಲೇ ಸುಬೋಧ, ಕನ್ನಡ ನುಡಿ, ಕೊಡಗು, ಜೀವನ, ಪ್ರಬುದ್ಧ ಕರ್ಣಾಟಕ, ಶ್ರೀ ಕೃಷ್ಣ ಸೂಕ್ತಿ, ಪ್ರಭಾತ, ಮೊದಲಾದ ಪತ್ರಿಕೆಗಳಲ್ಲಿ ಪ್ರಕಟವಾಗಿವೆ. ಈ ಪತ್ರಿಕೆಗಳ ಸಂಪಾದಕರುಗಳಿಗೆಲ್ಲ ನಾನು ಚಿರಋಣಿಯಾಗಿದ್ದೇನೆ. ಈ ಪುಸ್ತಕವನ್ನು ಇಷ್ಟು ಅಂದವಾಗಿ ಮುದ್ರಿಸಿ ಸಕಾಲದಲ್ಲಿ ಪ್ರಕಾಶನಕ್ಕೆ ಅನುವುಮಾಡಿಕೊಟ್ಟ ನನ್ನ ಮಿತ್ರರಾದ ಶ್ರೀ|| ಆರ್ ಎನ್. ಹಬ್ಬು ಅವರಿಗೆ ನನ್ನ ವಂದನೆಗಳು.

ಓದುಗರು ೧೪ನೆಯ ಪುಟದ ಆರನೆಯ ಸಾಲಿನಲ್ಲಿ "ಹಕ್ಕ ನೊರೆಯುವವರಿಂಗೆ" ಎಂಬುದನ್ನು "ಹಕ್ಕನೊರೆವವರಿಂಗೆ" ಎಂದೂ, ಎಂಟನೆಯ ಸಾಲಿನಲ್ಲಿ "ಬೀರುವ" ಎಂಬುದನ್ನು "ಬೀರುವರು" ಎಂದೂ ತಿದ್ದಿಕೊಳ್ಳಬೇಕಾಗಿ ವಿನಂತಿ.

ಮಡಿಕೇರಿ
ಸರ್ವಧಾರಿ ಸಂ|| ಜ್ಯೇಷ್ಠ ಬ. ೧೪

**ಮೈ. ಶೇ. ಅನಂತಪದ್ಮನಾಭರಾವ್**

# ಪ್ರಕಾಶಕರ ನುಡಿ

"ಶ್ರೀ ಕಾವೇರಿ ಸಾಹಿತ್ಯ ಮಾಲೆ"ಯನ್ನು ಆರಂಭಿಸಬೇಕೆಂದು ನಾನು ಮತ್ತು ನನ್ನ ತರುಣ ಮಿತ್ರರು ನಿಶ್ಚಯಿಸಿ, ಶ್ರೀ॥ ಅನಂತ ಪದ್ಮನಾಭರಾಯರವರ "ಬೃಂದಾವನ"ವೆಂಬ ಕವನ ಸಂಗ್ರಹವನ್ನು ಈ ಸಾಹಿತ್ಯ ಮಾಲೆಯ ಮೊದಲನೆ ಮುಗುಳಾಗಿ ಕನ್ನಡಿಗರ ಮುಂದೆ ನೀಡಿರುತ್ತೇವೆ. ಜೊತೆಯಲ್ಲೇ ಶ್ರೀ ಕಾವೇರಿ ಪ್ರಕಟನಾಲಯವೂ ಆರಂಭವಾಗಿದೆಯೆಂಬುದು ಸಂತೋಷದ ಸಂಗತಿ. ಈ ಬಗೆಯ ಸಾಹಿತ್ಯ ಮಾಲೆ ಕೊಡಗಿನಲ್ಲಿ ಮೂಡಿರುವುದು ಇದೇ ಪ್ರಥಮ. ಈ ಉದ್ಯಮಕ್ಕೆ ಧನ ಸಹಾಯವು ಯಥೇಷ್ಟವಾಗಿ ಅಗತ್ಯವೆಂಬುದನ್ನು ಪ್ರತ್ಯೇಕ ಹೇಳಬೇಕಾಗಿಲ್ಲ. ಇದು ಕಷ್ಟವಾಗಿರುವ ಪ್ರಯುಕ್ತ ನಮ್ಮ ಮೊದಲನೆ ಪ್ರಯತ್ನದ ಮುಗುಳು ಬಹಳ ಸಣ್ಣದಾಗಿದೆ. ಕನ್ನಡ ಸಾಹಿತ್ಯಾಭಿಮಾನಿಗಳು ನಮ್ಮ ಈ ಪ್ರಯತ್ನದಲ್ಲಿ ನೆರವಾಗಿ ಎಲ್ಲ ಬಗೆಯ ಪ್ರೋತ್ಸಾಹವನ್ನೂ ನೀಡುವರೆಂಬ ಭರವಸೆಯಿಂದ ನಾವು ಈ ಸಾಹಸಕಾರ್ಯಕ್ಕೆ ಕೈಹಾಕಿರುತ್ತೇವೆ.

ಪ್ರಕೃತ ಕಾವ್ಯದಲ್ಲಿನ ಅನೇಕ ಕವಿತೆಗಳು ಈಗಾಗಲೇ ವಿವಿಧ ಪತ್ರಿಕೆಗಳಲ್ಲಿ ಬೆಳಕು ಕಂಡಿವೆ. ತಮ್ಮ ಈ ಕವಿತಾ ಗುಚ್ಛವನ್ನು ನಮ್ಮ ಸಾಹಿತ್ಯ ಮಾಲೆಯಲ್ಲಿ ಪ್ರಕಟಿಸಲು ಅನುಮತಿಕೊಟ್ಟ ಶ್ರೀಯುತ ರಾಯರವರಿಗೆ ನಾವು ತುಂಬ ಋಣಿಗಳು. ಸುಂದರವಾಗಿ ಅಚ್ಚುಮಾಡಿ ಸಮಸ್ತ ಬಗೆಯಿಂದ ಸಹಾಯ ನೀಡಿದ ಮೈಸೂರಿನ ಉಷಾ ಮುದ್ರಾಲಯದ ಒಡೆಯರಾದ ಶ್ರೀ॥ ಆರ್. ಎನ್. ಹಬ್ಬು ಅವರಿಗೆ ನಾವು ಅತ್ಯಂತ ಕೃತಜ್ಞರಾಗಿದ್ದೇವೆ.

ಮಡಿಕೇರಿ
೧-೬-೪೮

ಸಿ. ಎಂ. ರಾಮರಾವ್
ಸಂಪಾದಕ

# ಪರಿವಿಡಿ

# ಬೃಂದಾವನ

ಗೋಪಿಯರೊಡನಾ ಬೃಂದಾವನದಲಿ
  ಲೀಲಾ ನಾಟಕವಾಡಿದ ನಲಿದು
ಬೃಂದಾವನವೇ ಕೃಷ್ಣನ ಬಾಲ್ಯದ
  ತವರೂರಾಯಿತು ಜಸವನು ಮೆರೆದು.
ಹಿರಿಯರು ಬಂದರು ಹಿರಿತನ ಮರೆದು
ಎಳೆಯರು ಕುಣಿದರು ಕೃಷ್ಣನ ಕರೆದು
ತರುಣಿಯರೆಲ್ಲರು ಮೋಹವ ತೊರೆದು
  ಕೊಳಲಿನ ಕೃಷ್ಣನ ರೂಪವ ನೆನೆದು
ಕೃಷ್ಣನ ಕೊಳಲಿನ ಗಾನವ ಕೇಳ್ದು
  ಎಲ್ಲರು ಬರುವರು ಆತುರ ತಳೆದು.

ಜನನ–ಮರಣ ಜಂಜಾಟವ ಗೆಲಿದು
  ಆತ್ಮದ ದರ್ಶನ ಮಾಡಿದ ತಾಣ
ಕೀಳ್ಮೇಲೆಂಬುದು–ಆಳ್–ಪೆಣ್ ಎಂಬುದು
  ಮಾಸಿದ ಪಾವನ ಭೂಮಿ ನಿದಾನ.
ಪಶುಪಾಲನೆಯೇ ಕೃಷಿಕರ ಮಾನ
ಕೃಷ್ಣನ ಕೊಳಲಿನ ಮಧುರಸ ಪಾನ
ಎಲ್ಲರೊಳೊಂದೇ ನೋಟದ ಮೌನ
  ಏನಿದು ಎಲ್ಲೂ ಮೆರೆವನು ಜಾಣ
ಮನಕದ್ದೊಯ್ದನು ಜನವನು ಕಾಣ
  ಎಲ್ಲರ ಸೆಳೆಯುವ ಮೋಹನ ಬಾಣ.

ಯಮುನಾ ತೀರದ ಮರಗಳ ಮರೆಯಲಿ
ಬಿಟ್ಟಿದ ಮೇಗಡೆ ಸರ್ವರ ಒಳಗೆ
ಲಾಸ್ಯದಿ ಮೂಡುವ ತಾಪವನೆಳೆಯುತ
ಬಿಂಬಿಸುತಿರುವನು ಬರುತಲಿ ಹೊರಗೆ
ಗೋಪಿಯರ ಧ್ವನಿ ಕೇಳಿತು ಧರೆಗೆ
ದೂರವ ಕಾಣದೆ ಬಂದರು ಹೇಗೆ ?
ಎಲ್ಲಿದೆ ಧಾವತಿ ಮನವೊಂದಾಗೆ
ಒಂದೇ ಕಾಂಬುದು ನೋಡಲು ಹೊರಗೆ
ಆತ್ಮದ ದರ್ಶನ ಮಾಡುತ ಒಳಗೆ
ಭಕ್ತರು ನಿಂದರು ಕೃಷ್ಣನ ಕರೆಗೆ—

ಬೃಂದಾವನದಲಿ ಸರ್ವರು ಸ್ತ್ರೀಯರು
ಕೃಷ್ಣನ ಹೊರತಿನ್ನಾವನು ಪುರುಷ
ಮೀರಾದೇವಿಯ ದರ್ಶನದಿಂದಲಿ
ಗೋಸ್ವಾಮಿಯ ಮತಿಯಾದುದು ಸರಸ.
ಗೋಪಿಯರಿಟ್ಟರು ಸತ್ಯದ ಕಳಸ
ಭಕ್ತರನೆಯ್ದಿತು ಪ್ರೇಮದ ಪರುಷ
ಆದುದು ಲೋಕದ ಮನ ಸಂತೋಷ
ಇರುವುದು ಇನ್ನೂ ಕೃಷ್ಣನ ಹಾಸ
ಯಮುನಾ ತೀರದ ಮಾನವ ವೇಷ
ನೋಡದೊ ನಿರುತಂ ರೂಪೋದ್ಭಾಸ.

# ಏಕನಾದ

ಕೇಳುತಿರುವುದೊಂದು ದನಿಯು
ಏಕನಾದದಿಂದ ನುಡಿಯು
ನೇತಿ ನೇತಿ ಎಂಬ ನಿಗಮು
ನೀತಿ ಕೇಳುತಿರುವದಮು
ಮಿಡಿವುದೇಕೊ ಏಕನಾದ
ನುಡಿವುದೇನೊ ಹಲವು ವಾದ.

ಒಂದು ತಂತಿಯಿಂದ ಹಲವು
ನಾದವೊಡೆದು ರಾಗರಸವು
ಹಳೆಯದನ್ನು ಹೊಸದು ಮಾಡಿ
ಹೊಸದ ಹಳೆಯದಾಗಿ ಮಾಡಿ
ಧರ್ಮವುರುಳೆ ಕರ್ಮ ಸಡಿಲೆ
ಸತ್ಯ ಸೊರಗಿಹೋಯ್ತು ಮೇಲೆ.

ಲೋಕದಿರವ ಹಾಡುತಿಹುದು
ಭಿಕ್ಷವನ್ನು ಬೇಡುತಿಹುದು
ಜೀವ ಮಿಡಿದು ನೋಡುತಿಹುದು
ಮಧುರ ಶ್ರುತಿಗೆ ಹೇಳುತಿಹುದು
ರಾಗ ರಚನೆ ರಸ-ವಿಹಾರ
ವೊಂದರೊಳಗೆ ನೆರೆ ಗಭೀರ.

ಲಜ್ಜೆ ಭೀತಿಯಿಲ್ಲದಿರುವ
ತಂತಿಯರಿತು ಜೀವ ಭಾವ
ನುಡಿಯುತಿಹುದು ಲೋಕಕೊಲವ
ಏಕಮಾರ್ಗ ನೋಟ ಹಲವ
ಚಿತ್ರ ತೋರಿ ಹಾಡುತಿರುವ
ತಂತಿಗೊಲಿದು ಕುಣಿತ ಕುಣಿವ.

ಒಂದೆ ರಾಗ ಒಂದೆ ಸ್ವರ
ಒಂದೆ ಮೇಳ ನಾದವಮರ
ಹೃದಯದೊಳಗೆ ಒಳಗೆ ಒಳಗೆ
ಇರುವ ದೇವ ನಲಿದು ಹೊರಗೆ
ದರುಶನವ ನೀಡೆ ಬಂದ
ತಂತಿ ಮಿಡಿದು ಹಾಡು ಎಂದ.

# ನೇಗಿಲು

ನೆಲದ ರಸವನೆ ಹಿಂಡಿ ನೇಗಿಲಿನ ಮೊನೆಯಿಂದ
ಅನ್ನಮಂ ಪಡೆಯುವರು ಮಣ್ಣಿನಿಂದ—
ಜೋಡೆತ್ತುಗಳ ಕಟ್ಟಿ ಜೀವದೆಳೆಗಳ ತಂದು
ಲೋಕಮಂ ಸಲಹುವುದು ಮೋದದಿಂದ—
ಕೆರೆದೆಳೆದು ಸಾರಮಂ ಸಾಲಿನಲಿ ನಿಲಿಸುವುದು
ಹಸನೆಸಗಿ ಸವಿಯೂಡಿ ಸುಲಭದಿಂದ—
ತೆರೆದು ಬೇರಿಗೆ ದಾರಿ ಬೆಳೆವ ಹಾದಿಯ ತೋರಿ
ಪ್ರಾಣವೀವುದು ಜಗಕೆ ಚೆಲುವಿನಿಂದ—
ನೇಗಿಲೇ ಸಾಧನವು ಸಕಲ ಜನಕೆ
ಸಾಗಿಸಲು ಸಂಸಾರ ಮುಕ್ತಿಪಥಕೆ
ನಿರಪೇಕ್ಷೆಯಿಂ ನೆರೆದು ಧರ್ಮರಥಕೆ
ಕರವಿತ್ತು ನಡೆಸುವುದು ನೇಗಿಲರಕೆ—

ಧ್ಯಾನ ಧಾನ್ಯವ ಬಿತ್ತಿ ಎದೆಯ ಹಸನಂ ಗೆಯ್ದು
ಈ ನೇಗಿಲೇ ಮನವ ಹಗುರೆನಿಪುದು.
ಗಾನ ಮಾಡುವುದಿದುವೆ ಜೀವತಂತಿಯ ಮಿಡಿದು
ಪರಲೋಕ ಮಂತ್ರಗಳ ಹಾಡುತಿಹುದು
ಸರುವ ದುರಿತವ ಮರೆಸಿ ಮುಕ್ತಿಸುಧೆಯನ್ನೆರೆದು
ನರಕ ಬಾಗಿಲ ಮುಚ್ಚಿ ಸಗ್ಗ ತೆರೆದು
ನರಲೋಕ ಕರ್ಮಗಳ ಕಟ್ಟುಗಳ ಹರಿದೊಗೆದು
ಹಿರಿದೆನಿಸಿ ಸ್ವೈಜಮಂ ತೋರಿಸುವುದು.
ಲೋಕಮಂ ಕಣ್ದೆರೆಸಿ ಜ್ಞಾನಯೋಗಿ
ವಾಕ್ಶುದ್ಧಿ ಗೆಯ್ವುದಿದು ಸತ್ಯಮಾಗಿ
ತ್ಯಾಗಿ ಈ ನೇಗಿಲೇ ಪರಮ ಭೋಗಿ
ನೇಗಿಲೇ ಧರೆಯಲ್ಲಿ ನಿತ್ಯ ಯೋಗಿ.

# ದರ್ಶನ

ಶ್ರೀರಾಮ ಪಟ್ಟಾಭಿಷೇಕದಲಿ ಒಲಿಯುತ್ತ
ಜಾನಕಿಯು ರಘುವರನ ಸಂಜ್ಞೆಯರಿತು.
ಹನುಮಂತನಿಂದಾಯ್ತು ರಾಮದರ್ಶನವೆಂದು
ನವರತ್ನಹಾರವಂ ಕೊರಳಿಗಿತ್ತು
ಸಿಂಗರಿಸೆ ಹೊಳೆ ಹೊಳೆದ ದೇದಿಪ್ಯಮಾನದಲಿ
ರಾಮರತ್ನವ ಧರಿಸಿ ನುಡಿಯ ಮರೆತು.
ಒಂದೊಂದೆ ರತ್ನಮಂ ಪರಿಕಿಸುತ ಕಡಿಯುತ್ತ
ಪುಡಿಗೈಯುತುಗುಳಿದಂ ರುಚಿಯನರಿತು.
ಆ ಸರದ ರತ್ನಗಳ ಹಾಳುಮಾಡಿ
ಶ್ರೀರಾಮರಡಿಗಳಲಿ ಹಾಕಿ ಹಾಡಿ
ತಾಯಿಯಾ ಕೋಪವಂ ನೊಂದ ನೋಡಿ
ಕೊಡಗಕೆ ಮಣಿಯೇಕೆಯೆಂದ ಬೇಡಿ.

ಕಪಿಗೆ ಸಿಂಗರವೇಕೆ ಗೌರವಂ ಸಲ್ಲುವುದೆ
ಕುಲಬುದ್ಧಿಯಂ ತೋರ್ದೆ ಪುಡಿಯ ಗೈದು
ಸಾಲದಾದುದೆ ನಿನಗೆ ನವರತ್ನಹಾರವಿದು
ಹಣ್ಣೆಂದು ಬಗೆದೆಯಾ ಹಸಿವ ನೆನೆದು.
ಇದೊ ಶಾಪ ನಿನಗೆಂದು ಕುಪಿತಳಾದಳು ತಾಯಿ
ಹಣೆ ಚಾಚಿದನು ಪದದಿ ದೇಹಕೆಡೆದು.
ಈ ಮಹಾ ಹಾರದೊಳು ರಾಮನಾಮದ ಸವಿಯು
ಕಾಣದಾಂ ಬಿಸುಡಿದೆನು ಹುರುಳನರಿದು
ನಿಸ್ಸಾರವೀ ಹಾರ ಕ್ಷಮಿಸು ತಾಯಿ
ರಾಮನಾಮದ ರತ್ನ ಸೌಖ್ಯದಾಯಿ
ರಾಮಸನ್ನಿಧಿಯಿರಲು ಬೇರೆ ಬೇಕೆ
ನಿಮ್ಮ ಮಗುವಾಗಿರಲು ಹಾರವೇಕೆ ?

ನಸುನಕ್ಕನಾ ರಾಮು ಸಂತವಿಸೆ ಸೀತೆಯನು
ಅವನ ಕೊಂಡಾಡಿದಳು ನಿಜವನರಿತು.
ರಾಮನಾಮದ ಮಹಿಮೆಯರಿತವನು ಹನುಮಂತ
ರಾಮನೊಲಿದಿಹನವಗೆ ತನ್ನನಿತ್ತು
ಭಕ್ತಿಮರುಳಿಂ ಕುಣಿವ ಹನುಮಂತನೊಡನಿರುವ
ತೊಡಕಾಯ್ತು ರಾಜ್ಯಮಂ ನಡೆಸಲೆನಿತು.
ಅವನು ನೆನೆದಲ್ಲಿರುವ ಅವನ ಪ್ರೇಮುಕೆ ಮಣಿವ
ಅಡವಿಯೇ ಮನೆಯಾಯ್ತು ಕಪಿಯ ಬೆರೆತು.
ರಾಮನಾಮವ ಹಾಡಿ ಕುಣಿಯುತಿಹನು
ಮೈಮರೆತು ದಾಶರಥಿ ನಗುತಲಿಹನು
ರಾಮ ಬಂದುದ ಕಾಣ ಅಳುತಲಿಹನು
ಮಾರುತಿಯ ನುಡಿಸಿದನು ಭರದಿ ತಾನು.

ಹಾಡುತಿರೆ ನೀನಿಲ್ಲಿ ರಾಜಕಾರ್ಯದ ನಾವೆ
ಎಂತು ನಡೆವುದು ಹೇಳು ರಾಜನಿರದೆ.
ಹಾಡು ಹಾಕುತ ಚಿಟಿಕಿ ಶಯನ ಕಾಲದಿ ಬಂದು
ಆಕಳಿಪ ಸಮಯದೊಳು ಎನಲು ನಿಜದೆ.
ತಾಯಿಯೊಡನಿರುವಾಗ ಸೆಜ್ಜೆಯೊಳು ಬಹೆನೆಂತು
ಅಲ್ಲೇಕೆ ಇಲ್ಲಿರುವೆ ಚಿಂತೆಯಿರದೆ.
ಆಗದಾಗದು ಹನುಮ ಅರಮನೆಯ ಬಾಗಿಲೊಳ್
ಇರ್ದು ನೀ ಇರುಳಿನೊಳು ನೆನೆದು ಬಿಡದೆ.
ಚಿಟಿಕಿಯಂ ಹಾಕಿದೊಡೆ ಆಕಳಿಸುವೆ
ಎನಲಯೋಧ್ಯೆಯನೈದಿ ರಾಮ ಸೇವೆ
ಯಲಿ ನಿಂದ ಭಕ್ತಿಯಲಿ ಆಯ್ತು ಮರವೆ
**ಚಿಟಿಕಿ ಹಾಕುತ ಕುಣಿದ ಹೇಳಲಳವೆ !**

ಬಿಟ್ಟ ಬಾಯ್ ಮುಚ್ಚದಿಹ ಮಲಗಿರುವ ರಘುರಾಮ
   ಸೀತೆಗಚ್ಚರಿಯಾಯ್ತು ಭಯದಿ ಬಂದು
ಗುರು ವಸಿಷ್ಠಂಗರುಹೆ ಓಡಿಬಂದರು ಹನುಮ
   ನಿರವರಿತು ಅಪ್ಪಿದರು ಕೈಯ ತಂದು.
ರಾಮನಿರವನ್ನೊರೆಯೆ ತಪ್ಪನೊಪ್ಪುತ ಬಂದು
   ಅಜನ ಪಟ್ಟಿವ ಪಡೆದ ಪದದಿ ನಿಂದು.
ಎಲೆ ರಾಮ ನೀ ಸುಲಭ ಮೋಡಿಗಳ ಮಾಡುವೆಯ
   ಎನುತ ನಮಿಸಿದ ಕಣ್ಣನೀರ ತಂದು
      ಅಚ್ಚರಿಯ ತಾಳಿದಳು ಸೀತೆ ಮನದಿ
      ಮೆಚ್ಚಿದಳು ಮಾರುತಿಯ ಹಿಗ್ಗಿ ಭರದಿ
      ಚಿರಜೀವಿಯಾಗೆಂದು ಹರಸಿ ಹೊಗಳಿ
      ಅರೆನಗೆಯ ನಕ್ಕಳಾ ದೇವಿ ಮಗುಳಿ.

# ಗೀತಾಚಾರ್ಯ

ಅರ್ಜುನನ ಹೃದಯದಲಿ ಪ್ರತಿಬಿಂಬಿಸಿದ ದೇವ
ಪರ್ಜನ್ಯನೊಲು ಆತ್ಮ ಸುಜ್ಞಾನಗಳ ತಿಳಿವ
ನಿರ್ಜೀವರಾದೆಮಗೆ ಧಾರೆಯೆರೆದೀ ಜಳವ
ವರ್ಜಿಸಿದೆ ಬೋಧಿಸುತ ನಿನ್ನ ವಚನಾಮೃತವ.
ಸೌಜನ್ಯ ಬೆಳೆ ಬಿತ್ತಿ ಬೆಳೆದೇರಿ ಪೂಫಲವ
ನಾರ್ಜಿಸಿದೆವಾವಿಂದು ನಿನ್ನ ಕೃಪೆಯಿಂದೊಲವ
ಪೂಜ್ಯಮಾದುದು ಸವಿದು ಗೀತಾ ಸುಧಾರಸವ.

ಒಂದೊಂದು ಮಾತಿನಲಿ ಹೃದಯವನೆ ತೆರೆಯಿಸುವೆ
ಎಂದೆಂದು ಮರೆಯದೊಲು ಸವಿವಾತನಾಡಿರುವೆ
ಅಂದಿನಿನ್ನಿನ್ನೆವರ ಮುಂದೆಯುಂ ಸೊಗಯಿಸುವೆ
ಹಂದೆಗಳ ಹೇಡಿಗಳ ಹುರಿಮಾಡಿ ಮೆರೆಯಿಸುವೆ
ಮಂದಾರಮನ್ನಿತ್ತು ಲೋಕಮಂ ಬೆಳಗಿರುವೆ
ನಂದನೋದ್ಯಾನವನೆ ಜಗದ ಮೇಲಿಟ್ಟಿರುವೆ
ತಂದೆಯಲ್ಲಿಹುದೆಲ್ಲ ಸುರಭಿ – ಕಲ್ಪದ್ರುಮವೆ.

ಧರೆಯು ಕೀರ್ತನು ಮರೆತು ಮೌಢ್ಯಮೇ ಪೆರ್ಚುತಿರೆ
ಸರುವಕುಂ ತಾನು ಹೊಣೆಯೆನೆ ಗರುವ ಮೂಡುತಿರೆ
ಧರುಮ ಕರುಮಗಳಳತೆಯೇನೊಂದನರಿಯದಿರೆ
ಮೊರೆಯುತಿದೆ ನಿನ್ನಮೃತವಾಣಿತಾಮರೆಯದಿರೆ
ಕರುಣದಿಂದೀಕ್ಷಿಸಿದೆ ಕಲಿಯುಗವ ನೀನರರೆ
ಸರುವ ಲೋಕದೊಳೆಂದು ಪೂಸದಿಹ ಧರುಮ ಕರೆ
ಚರಣುಪಾವನ ತರಣು ಇರಲಿರಲಿ ಕೃಪೆಯ ಮರೆ.

# ಪರಮಹಂಸರಿಗೆ

ತನ್ನ ತನ್ನೊಳಗರಿದು ತೋರಿಸಿ
ತನ್ನನೆಲ್ಲರೊಳರಿದು ಸರ್ವರ
ನನ್ನಿಯಿಂ ಕಂಡಿಹನು ದೈವವ
ಹಿರಿಮೆಯೆಂತೆಂದು.
ಅನ್ಯರಾವುಟವಿಲ್ಲ ದೇವರು
ತನ್ನ ಹೊರತಿನ್ನಿಲ್ಲ—ಎಲ್ಲರ
ನನ್ಯಭಾವವ ತಳೆಯೆ ಹೊಳೆವುದು
ಸಕಲಮೇಕತ್ವಂ—

ಸರ್ವಸಂಗ ತ್ಯಾಗ, ತನ್ನಿಂ
ದುರ್ವರೆಯ ಹಿತಮೆಂಬ ಪೆರ್ಮೆಯ
ಗರ್ವ ಬಾರದು ಕೃಷ್ಣನಾಡಿತ
ದಂತೆ ನಿರಪೇಕ್ಷೆ
ಸರ್ವರೊಳು ಸಂಪ್ರೀತಿ ವಿನಯವ
ನಿರ್ವಹಿಸಿ ಷಡ್ವೈರಿ ವರ್ಜಿಸಿ
ಸರ್ವ ಲೋಕವನರಿವುದೇ ಸರಿ
ಯೆಂದನೀ ತವಸಿ.

ಜಗದ ಲೀಲಾರಂಗದಲಿ ಬಗೆ
ಬಗೆಯ ಮಾನವಕೋಟಿ ರೂಪದೊ
ಳೊಗೆದು ನಡೆಯಿಪ ಸೂತ್ರಧಾರಿಯ
ಹಿರಿಮೆಯಿಂತೆಂದು.
ಬಗೆ ಬಗೆಯ ಚಿತ್ರಗಳ ತೋರಿಸಿ
ಸೊಗಯಿಸಿದ ಶ್ರೀ ರಾಮಕೃಷ್ಣರ
ಬಗೆಗಳಚ್ಚರಿ ಲೋಕ ಮೆಚ್ಚಿತು
ಅವರಿಗೊಲಿದಿತ್ತು.

# ತಾಯಿಯ ಒಲವು

ಜಗದ ತೇಜವಿದೆಂದು ಇದ ಸಲಹಬೇಕೆಂದು
ಜನನಿಯಾದಳು ತಾಯಿ ನೋವು ಹಲವನು ತಿಂದು
ಹೊಸ ಜೀವವವಳಿಂದ ಕಳೆಗೂಡಿ ಮೈದುಂಬಿ
ಧರೆಗಿಳಿದು ಬಂದಿಹುದು ಅವಳ ಕರುಣೆಯ ನಂಬಿ.

ಗೇಣುದ್ದ ದೇಹದಿಂ ಬಂದ ಶಿಶುವಂ ಹಾಡಿ
ಬೇನೆಗಳ ಲೆಕ್ಕಿಸದೆ ಬೆಳೆಸಿದಳು ಮೊಲೆಯೂಡಿ
ಕುಲಕೋಟಿಯನು ಕಾಯ್ವ ದಿನಮಣಿಯು ನೀನೆಂದು
ತಾಯಾಗಿ ನೋಡಿದಳು ತನಗೆ ಮಗು ಬೇಕೆಂದು.

ಶಿಶುವಿರುವ ತಾಯಿಯೇ ಧನ್ಯೆ ಲೋಕದೊಳೆಂದು
ಹಲವು ಜನ್ಮಾಂತರದ ಸುಕೃತಫಲ ಮಗುವೆಂದು
ಹೊಳೆ ಹೊಳೆವ ಬೆಳ್ಳಸದ ಕೊಡೆಯೊಳಗೆ ಬಾಳೆಂದು
ನಲವಿಂದ ಹರಸುವಳು ಇರದಿರದೆ ತಾ ಬಂದು.

ತಾಯ ಕಣ್ಣಿನ ಮುತ್ತು — ಹೃದಯ ಕಮಲದ ಮುತ್ತು
ಅವಳ ನಲ್ಮೆಯ ಸ್ವತ್ತು — ಸುಖದ ಸೊಬಗಿನ ಸ್ವತ್ತು
ಅಳುವ ಬಾಯಿಯು ಬಿತ್ತು — ಹವಳ ತುಟಿಗಳ ಮುತ್ತು
ತನ್ನೆದೆಯ ಸವಿಯಿತ್ತು — ನೋಡುವಳು ಮನವಿತ್ತು.

ಈ ಶಕ್ತಿ ಈ ಬುದ್ಧಿ ಈ ತನುವು ಈ ಮನವು
ಅವಳ ಹರಕೆಯ ಹಾಲು ಈ ಕೀರ್ತಿ ಸದ್ಗುಣವು
ಅವಳ ರಕ್ತದ ಪಾಲು, ತಾಯ್ನಿಂದ ನೆಲದೊಲವು
ಭಾರತ ತಪಸ್ವಿನಿಯ ಕಣ್ಣಂಗಳದ ನಲವು.

ನುಂಗುವಳು ತಪ್ಪುಗಳ– ತಿದ್ದುವಳು ತೋರುವಳು
ತೊದಲು ಮಾತುಗಳಿಂದ ಹಿಗ್ಗಿ ಹಿರಿದಾಗುವಳು
ಪೂಗಾಯಿ ಹಣ್ಣಾಗಿ ಸವಿಗೂಡಿತೆನ್ನುವಳು
ಸಿಂಗರಿಸಿ ಮನದಣಿಯೆ ಹಾಡುವಳು ನೋಡುವಳು.

ಈ ಹೂವು ನಿನದೆಂದು ದೇವರಡಿಯೊಳು ನಿಂದು
ಬೆಳಕಿತ್ತು ಬಾಳಿತ್ತು ಇದ ನಿತ್ಯ ನೋಡೆಂದು
ಈ ಜೀವ ಹಸನೆನಿಸಿ ಆತ್ಮದೊಳು ಮೂಡೆಂದು
ಒಂದು ಮನದಲಿ ಬೇಡಿ ಕಾಪಿಡುವಳೆಂದೆಂದು.

ಆರರಿವರೀ ಪ್ರೇಮ ನೇಮ ಧರ್ಮದ ಗುಟ್ಟು
ನಾರಿಯರ ಹೃದಯವೇ ತಾಯಿಯೊಲವಿನ ಮಟ್ಟು
ಒಂದು ಬೀಜವನಿಟ್ಟು ಬೆಳಸುವಳು ಉಸಿರಿಟ್ಟು
ಹಸುರನೆರಚುವಳೆಲ್ಲ ಲೋಕದೊಳು ಕೈಬಿಟ್ಟು.

ಹಲವು ದೇವರನೇಕೆ ಪೂಜಿಸುತ ಅಳಬೇಕು
ನಲಿವ ಮಾತೆಯ ನೋಡಿ ಅವಳ ಪೂಜಿಸಬೇಕು
ಸತ್ಯ ಭೂಮಿಯ ಪುತ್ರಿ ನಮ್ಮ ಬದುಕಿನ ಬೆಳಕು
ಪದಸರೋಜದೊಳೊಂದು ಹೂವನಿರಿಸಲಿಬೇಕು.

# ಮರೆತು ಗೂಡನು ಹಕ್ಕಿ ಮನೆಯೊಳಗೆ ಬಂದಿಹುದು

ಮರೆತು ಗೂಡನು ಹಕ್ಕಿ ಮನೆಯೊಳಗೆ ಬಂದಿಹುದು
ಇರುಳಿನಲಿ ಭಯವೆರಸಿ ದಾರಿ ಮರೆದಿಹುದು
ಹೊರಗೆ ಚಳಿ ಮಳೆ ಗಾಳಿ ಜಗವ ಭಯಗೊಳಿಸುವುದು
ಸೊರಗಿ ಮೌನದಿ ನಡುಗಿ ಭೀತಿಗೊಳುತಿಹುದು.

ಒಳ ದನಿಯು ಅಡಗಿಹುದು ಎದೆಯೊಳಗೆ ಉಸಿರಿಲ್ಲ
ಕಳೆದೊಗೆದ ಸಿಪ್ಪೆಯೊಲು ಬಾಳಲರಿವಿಲ್ಲ
ಏನಪಾಯವು ಬಹುದೊ ಸೆರೆಯಲ್ಲದಿನ್ನಿಲ್ಲ
ಕಾಣದಿಹ ದಿಕ್ಕುಗಳ ನೋಡುತಿಹುದಲ್ಲ.

ಎಲ್ಲಿಂದ ಬಂದೆನೋ ಇಲ್ಲೆನಿತು ಸಮಯವೋ
ಎಲ್ಲಿಗೆಯ್ವುದೊ ಮುಂದೆ– ಮುಂದಾವ ನೋವೊ ?
ಬಲ್ಲವರ ಸುಳಿವಿಲ್ಲ ಬಲ್ಲಿದರ ನೆರೆಯಿಲ್ಲ
ಇಲ್ಲಿ ಪರಮಡಿಲಿನಲಿ ತನಗಿನ್ನು ಸಾವೊ ?

ದೀನ ದಿಟ್ಟಿಯು ಮೂಡಿ ಎದ್ದರೇನೋ ಎಂದು
ಮಾನಕೇ ಚ್ಯುತಿಯಾಯ್ತು ಇಲ್ಲಿ ತಾಂ ಬಂದು
ಹೀನತನದಿಂ ತನ್ನ ತಿನ್ನುವರು ಇವರೆಂದು
ಮ್ಲಾನಮುಖದಿಂ ಸೊರಗಿ ಕರಗುತಿದೆ ನೊಂದು.

ಹಳೆಯುಗದ ನೆನಪಿಲ್ಲ ಹೊಸ ಜಗದ ಅರಿವಿಲ್ಲ
ಕಳೆದುಳಿದ ದಿನಮಾನದಳತೆ ಗೊತ್ತಿಲ್ಲ
ಎಲ್ಲರೂ ತನ್ನಂತೆ ಕೊಳೆವ ಜೀವಿಗಳೆಲ್ಲ
ಹೊಲ್ಲದೀ ಬಾಳಿನ್ನು ಮೋಕ್ಷಕ್ಕೆ ಸಲ್ಲ.

ಇರವರಿಯದಿರುತಿಹರು ಅದಕಾಗಿ ದುಃಖಿಸರು
ಹೊರಹೊಮ್ಮಿ ಸಾಗುತಿದೆ— ಅದ ಕಾಣರಿವರು
ಸರುವ ಸುಖವಿದು ಎಂಬ ಭ್ರಾಂತಿಯಿಂ ತುಂಬಿಹರು
ಜರೆ ಬಾಯ ತೆರೆದಿಹುದು ಅದ ನೋಡದಿಹರು.

ರೆಕ್ಕೆ ಮುರಿದಿಕ್ಕಿದರು ಕಾಲಲದಿ ತುಳಿಯುವರು
ಹಕ್ಕನೊರೆಯುವವರಿಂಗೆ ಬುದ್ಧಿ ಹೇಳುವರು
ಅಕ್ಕರೆನರಿಯುದರು ಸತ್ವವನೆ ಕಾಣದರು
ಫಕ್ಕನೇ ಮುನಿಸಾಳ್ದು ಸೊಕ್ಕ ಬೀರುವ.

ಇದ ಕಂಡು ಭಯಗೊಂಡು ಕನಿಕರಿಸಿ ಉದ್ಧರಿಸಿ
ಬದುಕಿಸುವೆನಿವರನ್ನು ಎಂದು ನಿಜವರಸಿ
ಹದುಳ ನುಡಿಯಾಡಿದರೆ ಜಗ್ಗಿದರು ಸಿಂಡರಿಸಿ
ಹದನರಿತು ಬೇಡಿದುದು ಮಂಗಳವ ಹರಸಿ.

ಲೋಕ ಬದುಕಿದೊಡಾನು ಮುಕ್ತನಪ್ಪೆನು ಎಂದು
ಸಾಕಲ್ಯದಿಂ ಬೇಡುತಿರೆ ಬೆಳಕ ಕಂಡು
ಆ ಕಡೆಗೆ ಹಾರಿದುದು ನವಚೇತನವ ತಂದು
ನೂಕಿ ತಮ ಬೆಳಕಿತ್ತು ಸಂತಸದೊಳಂದು.

# ಕೃಷ್ಣಗಿರಿ ಕೃಷ್ಣರಾಯರಿಗೆ

ಕುಮಾರವ್ಯಾಸನ ವಾಣಿಯ ನುಡಿಯುವ
ವೀಣೆಯು— ಗಮಕದ ಶಾಸ್ತ್ರಜ್ಞಾನ
ಆ ಕವಿಕಾವ್ಯದ ದಿವ್ಯ ಧ್ವನಿಯೀ
ಕೃಷ್ಣನ ಹೃದಯದ ಗಾನದ ತಾನ—

ಕುವರವ್ಯಾಸನ ದೇಗುಲ ಕೃಷ್ಣನ
ಹಾಡುವ ಸೊಬಗಿನ ಹೃದಯ ನವೀನ
ಆ ಕವಿಯಗ್ಗಳಿಕೆಗಳಂ ಸಾಧಿಸಿ
ಶೋಧಿಸುತುಣಿಸುವ ಮಧುರಸ ಪಾನ.

ಎಲ್ಲಿದೆ ಜೀವ ಎಲ್ಲಿದೆ ಭಾವ
ಮೌನದ ಮಾತನು ಕುಣಿಸುವನಾವ—
ಸಂಗೀತದ ದನಿಯಿಂದಲಿ ಕೂಡಿಸಿ
ರಸಕಳೆ ತುಂಬುವ ಶಬ್ದದ ಜೀವ.

ಆ ಕವಿಯಿತ್ತನು ಮಾತಿನ ಮುತ್ತು
ಕೃಷ್ಣನ ಕೊರಳಿನ ಗಾನದ ಬಿತ್ತು
ಕೇಳುವ ಹೃದಯವ ಮಿಡಿಯುವ ಗತ್ತು
ಪಾತ್ರವನಾಡಿಪ ಪರಿಣತಿಯಿತ್ತು.

ಎಲ್ಲರನೊಂದೇ ಹೃದಯದಿ ತೋರುವ
ಸರ್ವರ ದೃಷ್ಟಿಗೆ ಸೈಜವ ತರುವ
ಕೃಷ್ಣನ ಲೀಲೆಗಳೆಲ್ಲವ ತುಂಬುವ
ಭಾರತ ಚರಿತೆಯ ಹಾಡುವನಾವ.

# ಮಣ್ಣಿನ ಒಲವು

ಮಣ್ಣು ಹೊನ್ನಿನ ಗೂಡು
ಮಣ್ಣು ಜೀವದ ಸೂಡು
ಮಣ್ಣು ಹೆಣ್ಣಿನ ಬೀಡು
ಮಣ್ಣು ಗಂಡಿನ ನಾಡು.

ಮಣ್ಣು ಪಾವನವೆಂದು
ತುಳಸಿ ಮೃತ್ತಿಕೆಯಾಯ್ತು
ಬಣ್ಣ ಬಣ್ಣದ ಮಣ್ಣು
ಮೈಗೆ ಪೂಸುವ ಗಂಧ.

ಉಪ್ಪು ಸಿಹಿ ಕಾರಗಳ
ಷಡ್ರಸಾಹಾರಗಳ
ಜೀವಕೇ ತವರಿದುವು
ಮಣ್ಣು ಸಂಜೀವನವು.

ಮಣ್ಣಿಂದ ಸಾಗರವು
ಸಾಗರದಿ ಮುತ್ತುಗಳು
ಹೊನ್ನು ರನ್ನಗಳೆಲ್ಲ
ಮಣ್ಣಿಂದಮೈಶ್ವರ್ಯ.

ಈ ರಾಜ್ಯ ಸಂಪದವು
ಈ ಸೌಧವರಮನೆಯು
ಸಾಮ್ರಾಜ್ಯ ಸಿಂಹಾಸ
ನಗಳು ಮಾಯದ ಮಣ್ಣು.

ನೀರೊಳಗೆ ಮುಳುಗಿಪುದು
ಆಗಸದಿ ಹಾರಿಪುದು
ನೆಲದಲ್ಲಿ ನಡೆಸುವುದು
ಶಕ್ತಿಗೇ ಗಣಿಯಿದುವು.

ದೇವ ಸೃಷ್ಟಿಯ ಮಣ್ಣು
ಬ್ರಹ್ಮಾಂಡವಾಯ್ತಿಂದು
ಚಣ ಚಣಕೆ ಹೊಸ ಯುಗವ
ಕರೆಯುತಿದೆ ತೋರುತಿದೆ.

ಸಕಲ ಬಗೆಗಳ ಜೀವ
ಖನಿಜ ಸಂಪದ ಭಾವ
ದೈವಶಕ್ತಿಯು ತೀವಿ
ತುಂಬಿರುವ ವರ ಕಣಜ.

ಈ ನಾಡು ಈ ಕಾಡು
ಎಂಬ ಭಾವದ ಮಾಯೆ
ಆಸೆ ಕಲಹದಸೂಯೆ
ಹುಣ್ಣುಂಟೆ ಪರಿಕಿಸಲು.

ಮಣ್ಣಿಲ್ಲದಿನ್ನಿಲ್ಲ
ನಿತ್ಯವಸ್ತುವೆ ಮಣ್ಣು
ಮನವರಿಯದಿರ್ದೊಡೀ
ಕಣ್ಣರಿಯದೇ ನಿಜವ.

ದೇವರ್ಗೆ ಮಣ್ಣೆಂದ
ರೇನು ಪ್ರೇಮವೊ ಕಾಣೆ
ಅಮೃತವನೆ ಬಿತ್ತಿಹನು
ಜೀವಕಳೆ ತುಂಬುವನು.

ಮಲ್ಲಿಗೆಯ ಸುತ್ಯಾಗ
ಶುಚಿ ಪ್ರೀತಿ ವಾತ್ಸಲ್ಯ
ವೈರಾಗ್ಯಮುಪಕಾರ
ಗುಣವೊಲಿಯಲೆಮಗಿಂದು.

# ಲಕ್ಷ್ಮಣನ ನಗು

ರತ್ನಸಿಂಹಾಸನದಿ ಮಣಿ ಕಿರೀಟವನಿಟ್ಟು
ತುಂಬಿದೊಡ್ಡೋಲಗದಿ ರಘುವೀರ ಶೋಭಿಸಲು
ಪಕ್ಕದಲಿ ಶ್ರೀಸೀತೆ ಮಂಡಿಸಿರೆ ನಸುನಗುತ
ಸರುವರುಂ ಕಣ್ತುಂಬ ನೋಡುತ್ತ ಸೇವಿಪರು.

ಭರತ ಶತ್ರುಘ್ನರುಂ ಚಾಮರವನಿಕ್ಕುತಿರೆ
ಸುಗ್ರೀವ ಮಾರುತಿ ವಿಭೀಷಣರ್ ಮೊದಲಾಗಿ
ರಘುಪತಿಯನೋಲಗಿಸುತಿರುವಾಗ ಲಕ್ಷ್ಮಣಂ
ಘೊಳ್ಳೆಂದು ನಕ್ಕನದ ಕೇಳ್ದುದಾ ಸಭೆಯೆಲ್ಲ.

ಹದಿನಾಲ್ಕು ಲೋಕದೊಡೆಯನ ನಿಂದು ಸರ್ವರುಂ
ಭಯದಿಂದ ಗೌರವಿಸುತಿರುವಾಗ ತಮ್ಮನೇ
ಮಾನವರಿಯದನಂತೆ ನಗುವುದೇ— ಇರಲಿರಲಿ
ವತ್ಸನೇ ನಗಲು ಕಾರಣವೇನು— ಹೇಳೆಂದ.

ಶತಕೋಟಿ ಸೂರ್ಯಪ್ರಕಾಶನೀಂ ಬೆಳಗುತಿರೆ
ರತ್ನಸಿಂಹಾಸನದಿ, ತಾಯಿ ಕೃಪೆಯಿಂ ನೋಡೆ
ಸಕಲರುಂ ಭಕ್ತಿಯಿಂದೋಲೈಸುತಿರುವಾಗ
ಮೂರ್ಖನಾಂ ನಿದ್ರೆಯಿಂ ಮಾಯೆಯೊಳು ಬಳಲುತಿಹೆ.

ಹದಿನಾಲ್ಕು ವತ್ಸರಂ ಎಚ್ಚರಿರೆ ತೂಕಡಿಸಿ
ಬಳಲಿಲ್ಲ ತೊಳಲಿಲ್ಲ. ಸೌಂದರ್ಯ ಮೂರ್ತಿಯಂ
ನೋಡುತಾನಂದಿಸದೆ ನಿದ್ರೆ ಬಂದುದಕೆನಗೆ
ನಗೆ ಬಂತು-- ಮೂಢತನಕಾಗಿ ಹರಿ, ಬೇರಿಲ್ಲ.

ಎನಲು ರಘುಪತಿ ನಕ್ಕು ಮನ್ನಿಸಿದ ತಮ್ಮನಂ
ಸರ್ವರುಂ ತಲೆದೂಗೆ ಚಚ್ಚರದಿ ಲಕ್ಷ್ಮಣನ
ಮನವರಿತು ಗೌರವಿಸಿ ರಘುವೀರನನುಜಗಿಂ
ಮಿಗಿಲಾದ ಭಕ್ತರಾರಿಹರೆಂದು ಹೊಗಳಿದರು.

## ಆಗಸದ ಕಾಣಿಕೆ

ಆಗಸದ ಕಡಲೊಡೆದು ಉಕ್ಕಿ ಹರಿಯುತಲಿಹುದು
ಲೋಕದೀ ಬೊಕ್ಕಸವ ತುಂಬುತಿಹುದು.
ಬೆಟ್ಟ ಗಿರಿ ತೊರೆ ತೋಡು ಕೆರೆ ಕುಂಟೆ ನದಿ ನದವು
ಬರುವ ಗಂಗೆಯು ಕರೆದು ಮನ್ನಿಸುವುವು.
ಆಗಸಕು ಭೂಮಿಗೂ ಬಾಂಧವ್ಯವನು ಬೆಳೆಸಿ
ಮಣ್ಣೊಳಿಹ ಸತ್ವಗಳ ತೆಗೆದು ಸೂಸಿ;
ಧನ್ಯರಾವ್ ಅಹಯೆಂದು ಕೆರೆನದಿಗಳುಕ್ಕೇರಿ
ಪಚ್ಚೆ ಪೈರುಗಳನ್ನು ತೆಗೆದು ತೋರಿ.

ಎಂಥೆಂಥ ರಸವಿಹುದು ಈ ಭೂಮಿಯೊಳಗೆಂದು
ಎಳನೀರು ಸವಿಜೇನು ಕೊಳ್ಳಿ ಬಂದು
ಮಾಗಾಯಿ ನಾರಂಗ ರಸವಾಳೆ ದಾಳಿಂಬ
ನಗುನಗುತ ಬಳೆದಿಹವು ಮರದ ತುಂಬ
ಸ್ವರ್ಗಲೋಕದ ಸುರರೆ ಸವಿಯಿರಿದ ನೀವೆನುತ
ನೀಡಿಹಳು ನೆಲವೆಣ್ಣು ಲೋಕವಿದಿತ.
ಅಮರಲೋಕದ ವರ್ಷ ಮಣ್ಣಿನೊಳು ತಾನಿಳಿದು
ಒಳಗಿನೊಳಗಿನ ಸವಿಯ ಸೆಳೆಯುತಿಹುದು.

ಹನಿಹನಿಯು ಹರಳಾಗಿ ಸುರಿವನಿಯು ರಸವಾಗಿ
ನೆಲದೊಳಗೆ ಹೊಸ್ನಾಗಿ ಹೊಳೆಯುತಿಹುದು
ಭಾರತಿಯು ನೀಡಿರುವ ವಜ್ರವಿಂದ್ರಂಗಾಯ್ತು
ವೃತ್ರನಂ ಕೊಲ್ಲುವೊಡೆ ಚಾಪವಾಯ್ತು
ಎಮ್ಮ ಸಾಗರದೆರವು ಶಕ್ರನಾ ಮುಗಿಲೊಡ್ಡು
ಮತ್ತಲ್ಲಿ ಬೇರಿಹುದೆ ಸೌಖ್ಯದೊಡ್ಡು

ಇಲ್ಲಿಗಿಳಿವರು ಸರುವ ದೇವತೆಗಳಾದರದಿ
ಇಲ್ಲಿನೀ ಸವಿಯುಣಲು ಬಯಸಿ ಭರದಿ.

ನೆಲದ ವೀರರು ಹೋಗಿ ಸುರರ ಕಾಪಿಡಲಾಯ್ತು
ಇಂದಿನಾ ಇಂದ್ರುಂಗೆ ರಾಜ್ಯಮಾಯ್ತು.
ಅಮರಲೋಕದ ಸುರರು ನರಲೋಕಕೆರವಿಗರು
ಅವರ ಹಂಗೆಮಗಿಲ್ಲ ನೋಡಿ ಸುರರು.
ಈ ರಸವು ಈ ನೀರು ಈ ಸುಖದ ಸವಿಯೂಟ
ನಮ್ಮ ಬಾಳಿಗೆ ಭೂಮಿಯಿತ್ತ ಮಾಟ.
ತುಂಬಲೀ ಧರೆಯೆಂದು ಗಗನ ವಿಶ್ವಾಸದಲಿ
ಇತ್ತ ಕಾಣಿಕೆ ಮಳೆಯು ನಿತ್ಯದಲ್ಲಿ.

# ಬರುವ ಸೂರ್ಯ

ಪೂರ್ವ ನಾರಿಯು ರವಿಗೆ ಆರತಿ ಬೆಳಗಿ ನಿಂದಿಹ ಚೆಲುವದೊ
ಕೆಂಪು ಸೀರೆಗೆ ಚಿನ್ನದೆಳೆಗಳ ಬಣ್ಣ ಬಣ್ಣದ ಒಡಲದೊ
ಕಾಳರಾತ್ರಿಯ ಜೈಸಿ ರಕ್ತದಿ ಮೈಯ ತೊಳೆಯುತ ಬಹನದೊ
ಬೆಂಕಿಯುಂಡೆಯೊ ಎನುವ ಕಾಂತಿಯ ಸೂಸಿ ನೇಸರ
ಬರವದೊ.

ನಿಂದ ಸಂಧ್ಯಾರಾಣಿಯಪ್ಪಿದ ಚೆಲುವ ಕಿರಣದ ಕರದಲಿ
ಮುನಿದ ಕಮಲಿನಿಗಿತ್ತು ಮುತ್ತನು ನಲಿಸಿ ನಗಿಸಿದ ಒಲವಿಲಿ.
ವಿಹಗ ಗಾಯನದಿಂದ ಸ್ವಾಗತವಿತ್ತು ಕರೆವುವು ಮುದದಲಿ
ವೇದಘೋಷದಿ ಪೂಜಿಸುವ ಜಗವನ್ನು ನೋಡುವ ನಗುತಲಿ.

ತಳಿರು ಪೂ ಪಣ್ಕಾಯಿಯರ್ಪಿಸಿ ಗಿಡಮರಂಗಳು ಕರೆವುವು.
ಪಾಲ್ಗರೆದು ಕ್ಷೀರಾಭಿಷೇಕದಿ ಸುರಭಿಗಣ ಮೈದೊಳೆವುವು.
ಹಿಂದೆ ಬಂದನು ಬಂದು ಹೋದನು ಇನ್ನು ಬಾರನು ಎನ್ನುವ
ಜಗಕೆ ಅಭಯವ ನೀಡಿ ಬರುತಿರೆ ಪೂಜೆಗೆಯ್ವರು ನವನವ.

ಸೂರ್ಯದರ್ಶನ ಮಾಡಿ ಶಾಂತಿಯ ಪೊಂದಿ ಚಂದ್ರಮ
ಮರೆಯಲಿ
ನಗವನಿಳಿದನು ಕಾಣದಾದನು ಉಡುಗಣಂಗಳ ಜೊತೆಯಲಿ.
ಶಬ್ದವಡಗಿದ ಜಗವ ಮುಟ್ಟುವ ಕಿರಣಕರಗಳ ನೀಡುತ
ಒಪ್ಪು ಮೂಡಿತು ಕಪ್ಪು ಬಾಡಿತು ತಪ್ಪು ಸಡಲಿತು ಮರೆಯುತ.

ರಾಣಿಯರು ಸಿಂಗರಿಸಿ ಮುಕುಟವನಿರಿಸಿ ಕೂರಿಸಿ ರಥದಲಿ
ಕಳುಹಿದರು ಸಂಪ್ರೀತಿಯಿಂದಲಿ ಜಗದ ಯಾತ್ರೆಗೆ ಮುದದಲಿ.
ಒಲಿದು ಬಂದನು ಹಸುರನೆರಚುತ ಬೆಳೆವ ಸೂರ್ಯನು ನಭದಲಿ
ಒರೆಸಿ ಮಬ್ಬನು ಜ್ಞಾನ ಜ್ಯೋತಿಯನೂದಿ ಸರ್ವರ ಮನದಲಿ.

# ನಗುವ ನಾಡು

ಎನ್ನ ಜೀವನದುಸಿರು ಈ ಮಣ್ಣು
ಎನ್ನ ಬಾಳಿನ ಕಡಲು ಈ ಹೆಣ್ಣು
ಎನ್ನ ನೋಟದ ಹೊನಲು ಈ ಕಣ್ಣು
ಎನ್ನ ಮಾತಿನ ಬಣ್ಣ
ಎನ್ನ ದೀಪ್ತಿಯ ರನ್ನ
ಕೊಡಗು ನಾಡಿನ ಚೆನ್ನ
ಇದು ನಮ್ಮ ಬೀಡು ಈ ಚೆಲುವ ನಾಡು.

ಅಲ್ಲಿ ಆ ಬೊಮ್ಮಗಿರಿ ಇಲ್ಲಿ ಈ ಪುಷ್ಪಗಿರಿ
ಆಗಸಕೆ ನೆಗೆಯುತಿಹವು
ಕಾವೇರಿ ಸ್ವರ್ಣವತಿ ರಾಮಲಕ್ಷ್ಮಣತೀರ್ಥ
ಗಂಗೆಯಂ ಹಳಿಯುತಿಹವು
ನೋಡಿ ಬೆಟ್ಟದಕೋಟೆ ಲೋಕದೊಳಗಿದು ಮಾಟ
ಋಷ್ಯಾಶ್ರಮಗಳ ಕೂಟ
ಕೋದಂಡ ಜೀವದೆವ ವೀರಯೋದ್ಧರೊಲಿರುವ
ತರುರಾಜಿ ನೋಡಿ ಮೆರೆವ.

ಇಕ್ಕೇರಿಯಿಂ ಬಂದು
ಹಾಲೇರಿಯೊಳ್ನಿಂದು
ರಾಜ್ಯವನು ಕಟ್ಟಿದರು
ನೆಲನಾಳ್ವ ಭೂಮಿಪರು
ಸಕಲ ನಾಡಿನ ಕೊಡವ ವೀರ ಸಹವಾಸದಲಿ
ಆಳಿದರು ಕೊಡಗು ನಾಡು
ಜಮ್ಮ ಉಂಬಳಿ ಕೊಟ್ಟು ನೆಲದೊಡೆಯತನವಿತ್ತು
ನೋಡಿದರು ನಗುವ ನಾಡು.

# ಭೂದೇವಿಯ ನೋಟ

ಜಗದ ಮೌನವನೊಡೆದು ಗಗನ ಗರ್ಭವ ಸೀಳಿ
ಜಲದ ಶಾಂತಿಯ ಕಡೆದು ಯುಗಯುಗದ ಬಗೆ ಕನಲಿ
ಉರಿವ ಬೆಂಕಿಯ ಜ್ವಾಲೆ ಹರಿವ ಗಾಳಿಯನಾಳಿ
ಮಾನವರ ಜೀವನವ ಬಲಿಗೊಳ್ಳುತಿದಿರಾಳಿ
ಸತ್ಯ ಧರ್ಮದ ಹೆಸರ ಬಗೆಯೆತ್ತಿ ಕರೆಯುತಿದೆ
ಲೋಕವೇ ಬರೆದಿಟ್ಟ ಶಾಸನವ ಮುರಿಯುತಿದೆ
ಕ್ರಾಂತಿ ಮಾರಿಯ ಬರವು ಲೋಕಕಾಯ್ತು.

ಮೂಡ ಪಡು ಬಡಗ ತೆಂಕಣದ ಮೂಲೆಗಳಿಂದ
ಬದುಕುಗಳ ಬಗೆಯೊಗೆದು ಕಾಲದೀ ಕರೆಯಿಂದ
ಹೆತ್ತೊಡಲ ಮಮತೆಯನು ಹೊತ್ತೊಡಲ ಶಾಂತಿಯನು
ತಿಳಿಯಲಾರದ ಹೃದಯ ನೂಕುತಿದೆ ಮೋಹವನು
ಈ ಮಣ್ಣು ವಿಷ ಹುಣ್ಣು. ನುಡಿವೆಣ್ಣು ಸುಡುಗಣ್ಣು
ಧರ್ಮದೀ ಹೆಸರಿನಲಿ ಕರ್ಮಗಳನುರಿಸುತಿದೆ
ಆಸೆಗಳ ಬಗೆಯಿಂದ ಪ್ರಳಯವಾಯ್ತು.

ಲೋಕದಾಯುಷ್ಯದಲಿ ಯುಗಯುಗಗಳುರುಳಿದುವು
ಯುಗದ ಯಂತ್ರವ ನಡೆಸಿ ನೋಡುವನು ರವಿ ದಿನವು
ರಜನಿಯನ್ನಾಳುತಲಿ ಕಳೆದ ಶಶಿ ನಿಶಿ ಹಲವು
ಜಲರಾಶಿಯೇರಿನಲಿ ಪ್ರಳಯಗಳು ದಾಟಿದುವು
ಆಸೆಗಳ ನೆಲೆಯಿಲ್ಲ. ದೋಷಗಳ ಬಗೆಯಿಲ್ಲ
ಒಂದು ಗುಣ ಒಂದು ನೆಲೆ ಒಂದು ಕೃತಿ ಒಂದು ಸ್ಮೃತಿ
ಶಾಂತಿಧರ್ಮದ ಬೀಡು ಪಾಲಿಗಾಯ್ತು.

ಜಗದಗಲ ನಭದಗಲ ಜಲಗಗನ ರಣವಾಗಿ
ಭೀಕರದ ನೃತ್ಯದಲಿ ಕ್ರಾಂತಿ ರಾಕ್ಷಸಿಯಾಗಿ
ಶಾಂತಿ ದಾಂತಿಗೆ ಮಣಿವ ಮಕುಟಗಳ ಹಗೆಯಾಗಿ
ಜಗದ ಬದುಕನು ಮುರಿವ ಕಾಣದಿಹ ತೊಡರಾಗಿ
ನುಡಿಯೊಂದು ನಡೆಯೊಂದು ಮನವೊಂದು ಗುಣವೊಂದು
ಕರುಣರಸಕಿಂಬಿಲ್ಲ ಅರುಣರಸಧಾರೆಯಲಿ
ಬಿಸಿ ನೆತ್ತರೀಂಟುತಿದೆ ಕಾಲವಿಂದು.

ಬಂಡೆಬಂಡೆಗಳುರುಳಿ ಹುಡಿಯಾಗಿ ಹೆಸರಳಿಸಿ
ಬದುಕಿನಾಗರವಾದ ಲೋಹಗಳು ರೂಪಳಿಸಿ
ಸುಖದ ಬೀಡೆನಿಸಿರ್ದ ಓಷಧಿಯು ಗುಣ ಮರೆಸಿ
ಗಾಳಿ ನೀರುಗಳೆಲ್ಲ ಹಸಿದಿಹವು ಮೈಮರೆಸಿ
ಮುಟ್ಟಿದರೆ ನೋಡಿದರೆ ಕೇಳಿದರೆ ಹೇಳಿದರೆ
ದೇಹವನೆ ಸುಟ್ಟಾವು ಜೀವವನೆ ಕೊಂಡಾವು
ಜಗದ ಜೀವದ ಜೀವ ಮೃತ್ಯುವಾಯ್ತು.

ಶಾಂತಿ ಸತ್ಯವು ಸೆರೆಗೆ ದ್ವೇಷಕರ್ಮವು ಹೊರಗೆ
ಸಾಧು ಶೌಚವು ಮರೆಗೆ ಪಾಪಸೂತಕ ಕೊಲೆಗೆ
ಸುಖದ ಸಂತಸವಡಗೆ ಹಿಂಸೆ ಭಯಗಳು ನೆರೆಗೆ
ಪುಣ್ಯಭೂಮಿಯ ಮಣ್ಣು ಮನೆಯಾಯ್ತು ಹೆಣಗಳಿಗೆ
ಇಲ್ಲಿ ಮೊರೆಯಲ್ಲಿ ಸೆರೆ, ಇಲ್ಲಿ ಭಯಮಲ್ಲಿ ಕೊಲೆ
ಉಸಿರುಸಿರು ಹೊಗೆಯಾಗಿ ಸಿಡಿಮದ್ದು ಕರೆದಾವು
ತವರಿಗೇ ಕಿಚ್ಚಿಕ್ಕಿ ಸುಡುವುದಾಯ್ತು.

ಭೂಮಿಯಾಚೆಯ ಕರೆಗೆ ತನುವೊಡ್ಡಿ ನಡೆದಿಹರು
ಆಚೆ ಈಚೆಯ ಕೃತಿಗೆ ಸಿಲುಕಿ ಮರೆಯಾಗಿಹರು
ಹಸಿವಿಗಾಹುತಿಯಾಗಿ ಕೆಲರು ಶಿಲೆಯಾಗಿಹರು
ನೀರಡಸಿ ಉಸಿರಾರಿ ಹಲರು ಹೆಣವಾಗಿಹರು

ಬದುಕೇಕೆ ಬಗೆಯೇಕೆ ಹೊಲಸು ಜೀವನವೇಕೆ
ಕಾಲರುದ್ರನ ಕರೆಗೆ ತಲೆವಾಗಿ ನಡೆದಿಹರು
ಪ್ರೇಮಪಾಶವ ಹರಿದು ಹೃದಯದಿಂದ.

ಆಲದೆಲೆ ನೌಕೆಯಲಿ ಕ್ಷೀರಸಾಗರದಲ್ಲಿ
ಕ್ರೀಡಿಸುವ ವಿಷ್ಣುವಿನ ಸುಳಿವೆಲ್ಲಿ ಇರವೆಲ್ಲಿ ?
ಪಾರ್ವತಿಯ ಕೈಸೇರಿ ಕೈಲಾಸಗಿರಿಯಲ್ಲಿ
ನೃತ್ಯಲಾಸ್ಯದಿ ನಲಿವ ಶಂಕರನ ನಡೆಯೆಲ್ಲಿ ?
ಕಾಣೆವೋ ಮರೆತೆವೋ ತಿಳಿಯೆವೋ ನೋಡೆವೋ
ದೇವರಿಹ ನೆನವೊಂದು ಭಯವೊಂದು ಕಾಣದೀ
ವಿಲಯಭೈರವಮೂರ್ತಿ ಚೇಷ್ಟೆಯಿಂದ.

ಅವತಾರಪುರುಷರಿಂದಾಗದಾ ನವಯುಗದ
ನಿರ್ಮಾಣ ಮಾಡುವೆವು ನಿಲಿಸುವೆವು ಹೊಸ ಜಗದ
ಕೋಟೆಯಲಿ ಶಾಂತಿಯನ್ ಕರೆತಂದು ಸವಿಸುಖದ
ಪೆಂಪುಬಿಂಪುಗಳುಣಿಸಿ ತಣಿಸುವೀ ಹಿರಿಮನದ
ಕಾಣದಿಹ ಕನಸುಗಳು ಕೇಳದಿಹ ವಾಣಿಗಳು
ತೋರುತಿಹವೆಮಗಿಂದು ನುಡಿಯದಿಹ ಸತ್ಯಗಳು
ಕಾಲರುದ್ರನ ನೃತ್ಯದೆಸಕದಿಂದ.

ಇದೊ ಸಿದ್ಧರಾಗಿಹೆವು ಕಾಲಪುರುಷನ ಕರೆಗೆ
ಇದು ನೋಡಿ ಅದು ಕೇಳಿ ನೀಗಿ ನೆಮ್ಮದಿಯ ಬಗೆ
ಈ ಬಾಳು ಈ ಗೋಳು ಸಾಕೆನಿಸೆ ಭೂತಾಯ್ಗೆ
ಸಾವು ನೋವುಗಳೆಲ್ಲ ಹೋಗಲಿಂದೇ ಕೊನೆಗೆ
ಹೊಸ ಯುಗದ ಸೋದರರು ಮಂಗಳವ ಹಾಡುವರು
ಕಲ್ಯಾಣಮಂಟಪವ ಕಟ್ಟುವರು ಮೆರೆಯುವರು
ಭೂತಾಯ ಸಿಂಗರಿಸಿ ತಿಲಕವಿರಿಸಿ.

# ಕುರಿಯಮಾತು

ಹೈಮವತಿಯೇ ತಾಯಿ — ಬಗೆ ಬಗೆಯ ರೂಪದಲಿ
ಭೂಮಿಯೊಳು ತಾ ಬಂದು — ನಲಿಯುವಳು ದೇಹದಲಿ
ಅವಳ ಕಿಡಿ ನಮ್ಮೊಳಗೆ
ನಲಿಯುತಿದೆ ಒಳಗೊಳಗೆ.

ಅವಳಿಮಗೆ ಹೆತ್ತಬ್ಬೆ — ಆದರೊಂದೇ ಚಿಂತೆ
ನರರೆಂಬ ಸೋದರರು — ಪ್ರೇಮ ತೋರೆದವರಂತೆ
ಬಲಿಯೀವರೆಮ್ಮನ್ನು
ಕೇಳುವವರಾರಿನ್ನು.

ಪರದೇಶಿ ಕುರಿಗಳಾವ್, ಎಮ್ಮ ನೆತ್ತರು ಮಾಂಸ
ಸವಿಯಂತೆ, ಬಯಸುವಳು — ಕೊಲಿಸುತ್ತ ಅವಳಂಶ
ಮಾತು ಬಾರದ ಜಂತು
ಪ್ರಾಣ ಕೊಡುತಿಹುದೆಂತು.

ಕರುಣದಿಂ ಕಣ್ಣೀರ — ಸುರಿಸುವಳ ದೂರುವರು
ಸಹೃದಯೆಯ ಕಲುಹೃದಯಳಂ ಮಾಡಿ ತೋರುವರು
ಎಮ್ಮ ಹೆಣ ತಿನ್ನುವರು
ರಕ್ತಮಂ ಕುಡಿಯುವರು.

ಚೋರ ಕರ್ಮಿಗಳಲ್ಲ — ಪ್ರಾಣಹಿಂಸಕರಲ್ಲ
ಹಸಿ ಹುಲ್ಲು ಎಲೆ ತರಗು — ಇದು ನರರ ಸ್ವತ್ತಲ್ಲ
ಸೊಪ್ಪುಸದೆ ದೇವಿಯದು
ಹರಿವ ಜಲ ತಾಯಿಯದು.

ಮತಿಯುಂಟು ಹಿತರುಂಟು – ಬಂಧು ಬಾಂಧವರುಂಟು
ಪರಮಾತ್ಮನರಿವುಂಟು – ಕಷ್ಟಸುಖದರಿವುಂಟು
ನಮಗಾರು ದಿಕ್ಕಿಲ್ಲ
ತಂದೆತಾಯಿಗಳಿಲ್ಲ.

ನಿಮ್ಮ ಕುಲ ಬಾಯ್ತುತ್ತು – ಮೂಕಜಂತುಗಳರರೆ
ತಾಯ್ಪಳಸಿ ಸಲಹಿರುವ – ಈ ದೇಹ ನಿಮಗೆ ಸೆರೆ
ನಾವಿರಲು ನಿಮಗಾಗಿ
ಕೊಲಲೇಕೆ ಮರೆಯಾಗಿ.

ಎಮ್ಮ ಮೈ ರೋಮಗಳು – ತೊಗಲು ಮಾಂಸವು ರಕ್ತ
ನಿಮಗೆರವು ಮಾಡಿದಳು – ಜನಕೆ ಇದುವೇ ಭುಕ್ತ
ಎಮ್ಮ ಕೊರಳನು ಕೊಯ್ದು
ಕಟುಕರಾದಿರಿ ಹೊಯ್ದು.

ಕತ್ತಿಗೆಯ ಕೊಯ್ದಾಗ – ನಿಮಗಾಗಿ ಮರುಗುವೆವು
ಅತ್ತಲಾ ಹೈಮವತಿ – ಕರವಾಳ ಮಸೆಯುವಳು
ನಿಮ್ಮಸುವ ಸೆಳೆಯುವಳು
ಆಮೇಲೆ ಕುಣಿಯುವಳು.

ನರಕುರಿಯು ನೀವಂತೆ – ಕುರಿಜನ್ಮ ನಿಮಗಂತೆ
ನರರಾವು ಮುಂದಂತೆ – ನಿಮ್ಮನುಳಿಸುವೆವಂತೆ
ಇಂತಬ್ಬೆ ಹೇಳುವಳು
ಕಣ್ಣೀರ ಹರಿಸುವಳು.

ಹಿಡಿಕಾಳು ಬಯಸಿಲ್ಲ – ನಿಮ್ಮಿಂದ ಬದುಕಿಲ್ಲ
ಕೆಡಕುಗಳ ಮಾಡಿಲ್ಲ – ಬಲ್ಲಳಿದನವಳೆಲ್ಲ
ನಿಮಗಾಗಿ ಆ ರೂಪ
ತಾಳಿದಳು ಬಹು ಕೋಪ.

ನಮ್ಮಿಂದ ನಿಮ್ಮಿರವು—ನಿಮ್ಮಿಂದ ಸಾವಲ್ಲ
ನಮ್ಮ ಮುಕ್ತಿಗೆ ಮಾತೆ—ಹೊಣೆಯಂತೆ ನೀವಲ್ಲ
ಕೋಪದಲಿ ಸಾಯದಿರಿ
ಪಾಪದೊಳು ಬೀಳದಿರಿ.

ನಮ್ಮ ಕೊಂದರೆ ವ್ಯಾಧಿ—ಮಾರಿ ರೂಪದಿ ಬಂದು
ನಿಮ್ಮ ತನು ಕುರಿಹೆಣವು—ಬಿದ್ದಂತೆ ನೆಲೆ ನಿಂದು
ಬಲಿಗೊಳ್ವುದರಿಯುವಿರಿ
ಸೆಳೆವುದನು ಕಾಣುವಿರಿ.

ತಾಯಿಯಂ ಪೂಜಿಸಿರಿ—ಫಲಪುಷ್ಪಚಯಗಳಿಂ
ಆ ವಿಮಲೆ ಕಾಯುವಳು—ನಲಿದೆಲ್ಲ ಕರಗಳಿಂ
ಕಾಯಬೇಹುದಹಿಂಸೆ
ಪಾಪವದುವೇ ಹಿಂಸೆ.

ಸಾವೆವೆಂಬಾ ದುಃಖ—ನಮಗಿಲ್ಲ ಲೋಕದಲಿ
ಕೊಲ್ಲದಿರಿ ಕುರಿಗಳಂ—ಸೋದರರೆ ಮೋಸದಲಿ
ನಿಮಗೆಮಗೆ ಹೈಮವತಿ
ತಾಯಹುದು ಗುಣವಂತಿ.

# ಬಯಕೆ

ಚೆಲುವ ಕನ್ನಡ ನಾಡ ಮಣ್ಣೊಳಾದೀ ದೇಹ
ಬೆಳೆದು ಕನ್ನಡ ತಾಯ ತೊಡೆಯಮೇಲೆ
ಇಂಬಾಗಿ ಮಲಗಿರಲು ಹಾಡಿ ಕನ್ನಡಗಬ್ಬ
ಹೃದಯದಲಿ ತುಂಬಿದಳು ರಸದ ಹಬ್ಬ.
ಕನ್ನಡಿಗನಾನೆಂಬ ವಜ್ರಕವಚವ ತೊಡಿಸಿ
ರಾಗರಸಭಾವಗಳ ಮನದೊಳಿಡಿಸಿ
ಕನ್ನಡದ ಹಿರಿಮೆಗಳ ಹಾಡೆಂದು ಮನಗೊಟ್ಟು
ಕನಸಿನಲಿ ಹರಸಿದಳು ಕಳಸವಿಟ್ಟು.

ಶಿವಮೊಗ್ಗೆಯಲಿ ಬಂದು ಸಮ್ಮೇಳನದಿ ನಿಂದು
ಕವಿಹೃದಯದೊಳಹೊಕ್ಕು ಕಂಡೆನಂದು
ನೋಡಿದೆನು ಕೇಳಿದೆನು ಕವಿಯ ಸವಿಕೃತಿಗಳನು
ಮೂಡಿದುದು ಹಿರಿದಾಸೆ ಹಾಡೆ ನಾನು.
ಗಾಯತ್ರಿ ಸೂಕ್ತದಲಿ ಮೊದಲಾದ ಕವಿವಾಣಿ
ಗಂಗಾವತರಣದಲಿ ಜನರಜಾಣಿ
ಮಂಗಳವ ತುಂಬಿದುದು ತೆರೆದು ಸರ್ವರ ಹೃದಯ
ಕನ್ನಡದ ಪೀರದಲಿ ಮೊಳಗಲುದಯ.

ಕಾಡಕುಸುಮಗಳಿಂದ ನಾಡದೇವಿಯ ಭಜಿಸಿ
ಮಡ್ಡನುಡಿ ಮಂತ್ರದಿಂ ಹಾಡಿ ನಮಿಸಿ
ದೇವಿಯೊಲುಮೆಯ ಪಡೆದ ಕಬ್ಬಿಗರ ಪದರಜದಿ
ಹೊಡೆಮರಳಿ ಪಡೆದಿರುವ ಸೂಕ್ಷ್ಮಪಥದಿ

ಜೀವವಿಲ್ಲದ ಗಾಜ ಹೇವವಿಲ್ಲದ ತಾನ
ಎರಡು ದನಿಗಳ ಮೇಳದಲ್ಲಿ ಮೌನ.
ಆರರಿಯದಂತಾನು ಮುಂಜಾವಿನಲಿ ಭಾನು
ಉದಯಿಸುವ ಪೂರ್ವದಲಿ ಹಾಡುತಿಹೆನು.

# ಭಾರತತಪಸ್ವಿನಿ–ಕಸ್ತೂರಿಬಾಯಿ

ಶ್ರೀ ಮಹಾತ್ಮರ ರಾಣಿ ಕಸ್ತೂರಿಮಾನಿನೀ
ಓ ಜಗತ್ಸಿಂಹಿನೀಂ – ಭಾರತತಪಸ್ವಿನೀ
ಮಲ್ಲಿಕಾಸ್ಮಿತವದನಿ – ಸುತ್ಯಾಗದರ್ಶಿನೀ
ಲೋಕದಾಸೆಯ ಬಿಟ್ಟು – ಪ್ರೇಮಸೂರೆಯ ಕೊಟ್ಟು
ಸರ್ವಾತ್ಮ ಲೀಲೆಯೊಳು – ಧರ್ಮ ಕವಚವ ತೊಟ್ಟು
ಸತ್ಯದರ್ಶನಮಾದ ತಾಯೇ
ಸೆರೆ ಕೊಳೆಯ ತೊಳೆದ ಧೀಯೇ.

ಅಮರ ತೇಜದಿ ಬೆಳಗಿ – ನಿತ್ಯದಲಿ ಬಯಲಾಗಿ
ಗಾಳಿಯಲಿ ಕೀರ್ತಿಪರಿಮಳ ಬಹುದು ಹಿರಿದಾಗಿ
ಹೃದಯವನೆ ತೀಡುತಿದೆ – ದುರ್ವಿಷಯುಕರಿಯಾಗಿ
ನಿರ್ಮಲವ ಮಾಡುತಿದೆ – ಬಿಡುಗಡೆಗೆ ಅಣಿಯಾಗಿ
ಹೇ ಮಾತೆ ಪ್ರಖ್ಯಾತೆ – ನಮಿಸುವೆವು ಶಿರಬಾಗಿ.
ತೆರಸು ಬಾ ಕಣ್ಗಳನು – ದೇವೀ
ನಡೆಸು ಬಾ ಸತ್ಯದಲಿ – ಓವೀ.

ಗತಿದೊರೆದ ಭಾರತೀಯರ ಜನ್ಮ ಭಾಗ್ಯಸಿರಿ
ಮುಳುಗದಿರು ಕಣ್ಮರೆಯ ಮಾಡದಿರು ಸುಖಲಹರಿ
ಭಾರತಿಯ ಸತ್ಪುತ್ರಿ – ಮಕ್ಕಳನು ನೋಡು ಬಾ
ಮುಕ್ತಹಸ್ತವ ನೀಡಿ – ಬಡತನವ ಹರಿಸು ಬಾ
ಸೆರೆಮನೆಯನೊಡೆದು ಬಾ – ತಾಯೆ ಕಸ್ತೂರಿಬಾ
ಕರುಣವನು ಕರೆಯ ಬಾ – ತಾಯೆ
ಪೂಜೆಯನು ಕೊಳ್ಳು ಬಾ – ತಾಯೆ.

ನೀನೆಲ್ಲರೊಳು ಬೆರೆತು ನಿತ್ಯಾತ್ಮವಾಗಿರುವೆ
ನಿನ್ನಂತರಂಗವೇ – ಸ್ವಾತಂತ್ರ್ಯರಣರಂಗ
ನಿನ್ನ ನುಡಿ ನಿನ್ನ ನಡೆ – ಎಮ್ಮನಿದೊ ಸಾಗಿಸಿವೆ
ಭಾರತಿಯ ಬಿಡುಗಡೆಗೆ – ಸಾಹಸವಗೈಸುತಿವೆ
ಎದ್ದೇಳು ನಿನ್ನವರ – ನೆನೆದು ಬಾ ಶ್ರೀ ವಧುವೆ
ಕರುಣದಲಿ ನಿಂದೊಮ್ಮೆ ನೋಡು
ಮುಗುಳು ನಗೆಯೊಂದನ್ನು ನೀಡು.

# ಚಂದ್ರ

(ಪುಷ್ಯ ಶುದ್ಧ ಅಷ್ಟಮಿ ರಾತ್ರಿ ೧೩-೧-೪೪)

ಹರಿವ ಮುಗಿಲ ನೌಕೆಯೇರಿ
  ಬರುವ ಚಂದ್ರ ಗಗನ ಸಾರಿ
ಅರ್ಧ ಮುಳುಗಿ ಅರ್ಧ ಬೆಳಗಿ
  ನಗುವ ರಜನಿಗೊಡೆಯನಾಗಿ
ಕಳೆಯ ಕೊಟ್ಟು ಬೆಳಕನುಟ್ಟು
  ಉಡುಗಣಂಗಳೊಂದಿಗಿಟ್ಟು
ಜಗವನಪ್ಪಿ ನಭವನೊಪ್ಪಿ
  ಜೀವಕೊಂದು ಕಳೆಯ ಕೊಟ್ಟು
  — ತಂಪು ಸೂಸಿ ಬರುವನು.

ಕರಿಯ ಮುಗಿಲು ಬಣ್ಣವೇರಿ
  ಗಗನಕೊಂದು ಹೊಳಪ ತೋರಿ
ನಭವ ಮುತ್ತಿ ರಾತ್ರಿ ಬರುವ
  ಚುಕ್ಕಿ ಗಣಕೆ ಕಣ್ಣ ತೋರಿ
ಹಗಲಿಗೇನು ಹೆಮ್ಮೆಯೆಂದು
  ರಾತ್ರಿಗೇನು ಕಡಮೆಯೆಂದು
ಕುಣಿದು ಕುಣಿದು ತಂಪನೆರೆದು
  ಶಾಂತಿಗಡಲನುಕ್ಕಿ ಹರಿದು
  — ನಗೆಯ ಹಾಸಿ ಬರುವನು.

# ತಾಯಿ ಭಿಕ್ಷಾ

ತಾಯಿ ಭಿಕ್ಷಾ ನೀಡವ್ವ
ಮಂದಿ ಭಂಗಾ ನೋಡವ್ವ.

ತೊಗಲು ಚೀಲದ ಬದುಕು ಕೆಟ್ಟೆ
ಎಷ್ಟು ಕೊಟ್ಟರು ತುಂಬದ ಹೊಟ್ಟೆ
ಅಲೆದು ಬೇಡಿ ಬಣ್ಣಗೆಟ್ಟೆ
ನಾಯಿಗಿಂತ ಗೋಳುಪಟ್ಟೆ
— ತಾಯಿ ಭಿಕ್ಷಾ ನೀಡವ್ವ.

ಇಲ್ಲೆನಬೇಡವ್ವ, ಮುಂದಕೆ
ಹೋಗೆನಲೇಕವ್ವ

ಒಂದು ಮಾತು, ಒಂದು ಕಾಸು
ಎಂಜಲಿತ್ತು ಹರುಕು ಹಾಸು
ನಿಮ್ಮಾ ಬಳಗದಿ ಬಂದೆನಗಾಯ್ತು
ಬೆಳೆಯಲಿ ನಿಮ್ಮಾ ಸುಖಸಂಪತ್ತು
ಬಡವರ ಗೋಳಿನ ಬಾಳ ವಿಪತ್ತು
ಅಡಗಲಿ ತಾಯಿ ಉರ ತೆರಪಾಯ್ತು
— ತಾಯಿ ಭಿಕ್ಷಾ ನೀಡವ್ವ.

ಹೊಟ್ಟೆಯೆ ಪಾತ್ರೆ ಹಸಿವೇ ಬೆಂಕಿ
ಕಲ್ಲೂ ಬೇವುದು ಅಲ್ಲೇನಂಕಿ
ಪಾಪಿಯ ಗೋಳಿಗೆ ಮರುಗುವರಾರು
ಸಾಸಿರ ಶಾಪದಿ— ಮೈಗೊಡರಾರು
— ತಾಯಿ ಭಿಕ್ಷಾ ನೀಡವ್ವ.

# ಮಣ್ಣಿನ ಮಣ

ಮಣ್ಣು ಹೊನ್ನಹುದೆಂದು ಅರಿಯರೇಕೋ ಜನರು
 ಕೊಟ್ಟ ಕಾಳನು ನುಂಗಿ ಫಲವೃಂದವೀವುದಲ
ಒಂದು ಬೀಜವ ಕೊಂಡು ಜನಜಗಕೆ ಜೀವಮಂ
 ಹರ್ಷದಿಂದೀವುದೀ ಮಣ್ಣಿಮಗೆ ಕಾರ್ಯಸಿದ್ಧಿ.

ಆವ ಕಾಲದೊಳಾವ ದೇಶದಲಿ ಆವ ಜನ –
 ಕಾವ ಫಲ ಸವಿಯೊಗರು ಕಹಿ ಸಪ್ಪೆ ಹುಳಿಯೆನಿಸಿ
ಫಲಧಾನ್ಯಮಮೃತಮಂ ತೆಂಗು ಕೌಂಗು ರಸಾಲ
 ಹಲಸುಗಳ ಕೊಳ್ಳಿರೆಸ್ನುತ ನೀಡಿ ಸಲಹುವುದು.

ಬೆಚ್ಚನೆಯ ಮನೆಯಿರಲು ನಿಂತು ನಡೆಯಲು ಭೂಮಿ
 ಮೊದಲಿಂದ ಕೊನೆತನಕ ಉಸಿರಾಡಲೀ ಗಾಳಿ
ಹಚ್ಚ ಹಸುರುಗಳಿತ್ತು ಹೊತ್ತು ಹೊಸ ಪರಿಮಳವ
 ಎಮ್ಮ ಮೂಗಿಗೆ ತಂದು ಮೈತೀಡಿ ಹರುಷಿಪುದು.

ಕುಸುಮದಲಿ ತೀವಿರುವ ಸವಿಜೇನು ಪಶುಗಳಲಿ
 ತುಂಬಿರುವ ಅಮೃತದಂತಹ ಹಾಲು ಶಿಶುವುಣುವ
ತಾಯಿಸ್ತನ್ಯದ ಸವಿಯು ಮಣ್ಣಿತ್ತ ರಸಮಹುದು
 ಕ್ಷಣ ಕ್ಷಣಕೆ ಕಾಯುವುದು ಹೊತ್ತ ಮಕ್ಕಳನಿಂತು.

ಹಳೆ ದೇಹವನು ಕೊಂಡು ಹೊಸ ಶರೀರವ ಕೊಟ್ಟು
 ಮರೆತ ಬುದ್ಧಿಯ ಮತ್ತೆ ಜ್ಞಾಪಿಸುತ ಬೆಳೆಸುವುದು
ಹೊಸ ತಿಳಿವ ನೀಡುತ್ತ ಅಲ್ಲಲ್ಲಿ ತಿರುಗಿಸುತ
 ಕಷ್ಟ ಸುಖಗಳ ಸವಿಯ ತೋರುತ್ತ ಕಳುಹುವುದು.

# ಆರು ಗತಿಯೆನಗೆ

ಪ್ರಕೃತಿಯಲಿ ಸೌಂದರ್ಯ ಕಾಣದೆಯೆ ಕುರುಡಾಗಿ
ವಿಕೃತಿಯನೆ ನೋಡಿದೆನು ಅದು ಸತ್ಯವೆಂದು
ಸುಕೃತಿಗಳನೊಪ್ಪದೆಯೆ ಎನ್ನದೇ ಸರಿಯೆಂದು
ಆಕೃತಿಯ ದುಷ್ಕೃತಿಗೆ ಬಲಿಗೊಟ್ಟೆನಯ್ಯ.

ನಾನು ದೊಡ್ಡವನೆಂದು ಹೆಮ್ಮೆಯಲಿ ಮೆರೆಯುತ್ತ
ಮಾನಾಪಮಾನಮಂ ಲೆಕ್ಕಿಸದೆ ನಡೆದು
ಎನ್ನ ಹಿರಿತನಕಾಗಿ ಗರ್ವದಲಿ ದರ್ಪದಲಿ
ಜನರ ಹಿಂಸಿಸಿ ಮೆರೆದೆ ಸಂತೋಷದಿಂದ.

ಪರಹಿತಕೆ ಮನಗೊಡದೆ ಎನ್ನ ನುಡಿ ಎನ್ನ ನಡೆ
ಸರುವವೆಂದರಿಯುತಲಿ ತೆಗಳಿದೆನು ಜನರ
ಪರಹಿಂಸೆ ಮರೆ ಮೋಸ ಸುಳ್ಳು ಮದ ಲೋಭದಿಂ
ಪರ ಮರೆತು ಸ್ವಾರ್ಥದಿಂ ಮೆರೆದಾಯ್ತು ಇನ್ನು.

ಒಂದು ನುಡಿ ಒಂದು ನಡೆ ಒಂದು ಮನ ಒಂದು ಕ್ರಿಯೆ
ನಿಂದೆನ್ನ ಹೃದಯವನು ನಿರ್ಮಲಂಗೆಯ್ದು
ತಂದೆ ನಿನ್ನಡಿಗಳಲಿ ಮನವೂರಿ ನೆನೆವಂತೆ
ಬಂದೆನ್ನ ಕಾಪಿಡ್ವೈ ಕೈ ಬಿಡದೆ ನಿತ್ಯ.

ನಿನ್ನ ಹೊರತಿನ್ನಾರು ಗತಿಯೆನಗೆ ಜಗದಲ್ಲಿ
ಎನ್ನಂತರಂಗದಲಿ ನೆಲಸಯ್ಯ ಶ್ರೀಶ
ಹೊನ್ನು ಮಣ್ಣುಗಳಿಂದ ಭ್ರಾಂತನಾಗುತ ತೊಳಲಿ
ಅನ್ಯರಿಂಗಾಳಾಗಿ ಬಾಳ್ಗೆಡಿಸಿಕೊಂಡೆ.

# ಮೋಡ

ಜಗದ ಜೀವವನುಂಡು ಹಲವು ಬಗೆಗಳ ಕಂಡು
ನಗುತ ನೆಗೆದಾಡುತ್ತ ಹಗಲಿರುಳು ಹಾರಾಡಿ
ತೆಗೆದು ತೀರದ ವಾರಿ ಹೊಗೆಯಾಗಿ ಹೂವಾಗಿ
ಮುಗಿಸೆ ನಭಯಾತ್ರೆಗಳ ಹಗುರಾಗಿ ನಡೆದಿರುವೆ.

ಬಿಸಿಲಿಂಗೆ ಮೈಯೊಡ್ಡಿ ಬಿಳಿ ವಸನಮಂ ಹೊದೆದು
ಹಸಿತ ವದನದಿ ತೋರಿ ಕುಣಿಕುಣಿದು ನಲಿದಾಡಿ
ನಸುಮುನಿಸ ಬೀರುತ್ತ ಉದ್ದವೋ ಗಿಡ್ಡವೋ
ಉಸಿರೆಳೆದು ಭಯರೂಪು ತಾಳುತ್ತ ನಡೆಯುತಿಹೆ.

ನೆಲಕಿಂತ ಆಗಸವೆ ನಲಿಯಲ್ಕೆ ಚೆಲುವೆಂದು
ಅಲೆದಲೆದು ತಿರೆ ನೋಡಿ ನಗುತಿರುವೆ ಹಾಸ್ಯದಿಂ
ಮೇಲಿಂದ ಧರೆಯೊಲವ ನೋಡುವುದೆ ಸೊಗಮೆಂದು
ಹಾಲಿನಂತೆಸೆಯುತಿಹೆ ನಭವೂಡದಲಿ ನಿಂದು.

ಬಿತ್ತರದ ಗಗನದಲಿ ತಡೆಯುವವರಾರಿಲ್ಲ
ಚಿತ್ತಾರವಮಂ ಬರೆದು ಮುಖಗೊಂಡು ಸಿಂಗರದಿ
ಚಿತ್ರತರ ಜಲಧಿಗನ್ನಡಿಯಲ್ಲಿ ಮೊಗ ನೋಡಿ
ಮುತ್ತುದುರಿಸುತ್ತಿರುವೆ ಜಲದೇವಿಯಾಗೆಸೆವೆ.

ಬಾನ ಬೇಸಿಗೆಯುಂಡು ನಕ್ಷತ್ರದೊಡಲಲ್ಲಿ
ನೀನು ಮೆರೆಯುತ್ತಿರಲು ಮಚ್ಚರಿಸಿ ನೀರೆಲ್ಲ
ಕಾಣಿಸದೆ ಮೈಮರೆಸಿ ಗಗನವೇರುತ್ತಿರಲು
ಮೌನವೇ ತುಂಬಿತ್ತು ಬಲು ಬಿಸಿಲ ಘಾಸಿಯಲಿ.

ಇಲ್ಲ ನೆರೆ—ಇಲ್ಲ ಕರೆ ನಿನ್ನ ಸುಳಿವಿನ್ನಿಲ್ಲ
ಬಲ್ಲಿದರು ಬಡವರುಂ ಮೂಕಜಂತುಗಳೆಲ್ಲ
ಅಲ್ಲಲ್ಲಿ ತೊಳಲುತ್ತಲರಸಿದರು ಬೇಸತ್ತು
ಮಲ್ಲಿಗೆಯ ನಗುವೆಲ್ಲ ಮಂಕಾಯ್ತು ನೀನಿರದೆ.

ನಿನಗೆ ತಿಳುಹುವರಾರು ನಿನ್ನ ಕರೆವವರಾರು ?
ನಿನಗೆ ಕಷ್ಟವನೊರೆದು ಬಾಯೆನುವರಾರೆಂದು
ಕಣುಗಳುಂ ಬತ್ತುತಿರೆ ರಾಯಭಾರಿಯು ವಾಯು
ಜನದುರಿಗೆ ದಯೆಗೊಂಡು ನಿನ್ನೆಡೆಗೆ ಹಾರಿದನು.

ಅಂದಾ ಭಗೀರಥನು ಭಾಗೀರಥಿಯ ತಂದ
ಇಂದೆಮಗೆ ಗಗನದಿಂ ವಾಯುತಹ ನಿನ್ನನ್ನು
ಚೆಂದದಿಂದಿಳಿದಿಳಿದು ಬಾ ತಾಯಿ ವೈದಳೆದು
ಬಂದೆಮ್ಮ ಒಳಹೊರಗೆ ಜೀವದುಂಬಿಸು ದೇವಿ.

ಮಳೆಯ ರೂಪವ ತಳೆದು ಹನಿಯ ಕೈಗಳ ಪೊಂದಿ
ಇಳೆಗಿಳಿದು ಬಾ ನಮ್ಮ ಚೆಲುವ ಬನ ತೋಟಗಳ
ನಲಿಸಿ ನಗಿಸುತಲೊಮ್ಮೆ ತವರೂರ ಸಂಚರಿಸು
ಜಲದೊಡಲಿನಿಂ ಬಂದ ವಾಹಿನಿಯರಂ ನೋಡು.

ಬರುವ ರಭಸಕೆ ಕಪ್ಪು ಮುಪ್ಪಾಗಿ ಮುರಿಯುತಿದೆ.
ಹೊರಟಳೆಂದಾ ಗಗನ ಕತ್ತಲೆಯ ಕಾರ್ಳುತಿದೆ
ಮರೆಯಾದ ನೇಸರಂ, ನೀನಲ್ಲಿ ನಡೆದಿರಲು
ಕರಗಿದೆದೆಯಿಂ ಬಂದೆ ಬಾ ತಾಯಿ ಬಾಗುವೆವು.

# ಗೋಮಾತೆ

ಮನುಜ ಕೋಟಿಯ ತಣಿಸಿ ಸವಿಯಮೃತಮನ್ನುಣಿಸಿ
ಬೆಳೆಸುತಿಹೆ ತಾಯಾಗಿ ಬೆಳಕು ಹರಿಸಿ.
ಎಲ್ಲ ದೇವತೆಗಳನು ಎಲ್ಲ ಜ್ಞಾನಂಗಳನು
ಧರ್ಮದೇವತೆಯಾಗಿ ನೀನು ಧರಿಸಿ
ಸಕಲ ಬೆಳೆಗಳ ಬಿತ್ತು ಸಕಲ ಜೀವದ ಮುತ್ತು
ನಿನ್ನಿಂದ ಬಾಳ್ಕೊದಲು ಬದುಕು ಸರಸಿ
ರಸದುಂಬಿ ಮೈಯೆಲ್ಲ ರಸಗೆರೆವೆ ಜಗವೆಲ್ಲ
ರಸವೂಡಿ ಕಾಪಿಡುವೆ ಸುಖವ ಬೆಳೆಸಿ.

ಆವ ಭೇದವ ಕಾಣೆ ಸಕಲ ತತ್ವದ ಜಾಣೆ
ಏಕಮೇವಾದ್ವಿತಿಯಮೆಂಬುದರಿತು
ನಿನ್ನ ನೋಡಲಿ ಬಿಡಲಿ ಕಾಪಿಡಲಿ ಹಿಂಸಿಸಲಿ
ಗಣಿಸದದ ಪಾಲ್ಗರೆವೆ ಕರೆದರೆನಿತು
ತಾಯಿ ಯೋಗಿನಿ ನೀನು ಅನಪೇಕ್ಷೆಯಿಂ ಪೊರೆವೆ
ನೆಲದ ಸುಧೆಯಂ ಹೀರಿ ಕೊಡುವುದರಿತು
ನಿನ್ನ ಮೈರಸದಂತೆ ನಿನ್ನ ಗುಣ ಹಸನಹುದು
ದಿವ್ಯವಾದುದು ನಡತೆ ಸುಗುಣವೆನಿತು.

ಓ ದೇವಿ ನಿನ್ನ ಮೈ ಅಮೃತಧಾರೆಯ ಸುರಿಸು
ಸುಜ್ಞಾನ ಸಂಪತ್ತು ಪೌರುಷಂಗಳ ಬೆಳೆಸು .

# ಪಕ್ಷಿಸಂದೇಶ

ಸೂರ್ಯ ಬರುವುದ ಕಂಡು ಚಿಂತೆಯ ತೊರೆದು ಪಕ್ಷಿಗಣಂಗಳು
ಮರದ ಕೊಂಬೆಯ ಮೇಲೆ ಬರುತಲಿ ಜಗವನೆಬ್ಬಿಸ ಬಯಸುತ
ಮಲಗಿ ನಿದ್ರಿಪ ಜನರ ಕಿವಿಯಲಿ ಮಧುರಗಾನವ ಹಾಡುತ
ಸವಿಯ ದನಿಯಿಂದುಲಿದು ತೊಟ್ಟಿಲ ಮಗುವ ಕಿಲಿಪಿಲಿ ನಗಿಸುತ.

ಒಂದು ದನಿಯೇ ಒಂದು ರಸವೇ ರಾಗಭಾವದ ಮೇಳವೇ
ಯಾರಿಗೋ ಆನಂದವೀಯುತ ಸ್ವಾರ್ಥಬುದ್ಧಿಯ ಮರೆತಿವೆ.
ಗೂಡತೊರೆಯುತ ಜಗವ ಕರೆಯುತ ಬದುಕಿನಿರವನು ಹೇಳವೇ
ಅದನು ಹೊಗಳುವ ಜನರನರಿಯದು ತಮ್ಮ ಹೆಮ್ಮೆಯ ನೆನೆವುವೇ.

ಕಾಡ ಮರದಲಿ ಮನೆಯ ಮಾಡುತ ಬೆಳೆಸಿ ಮಕ್ಕಳ ಮೋಹದಿ
ನೋಡದೀ ಜಗದಾಗು-ಹೋಗನು ಮನಕೆ ತಾರದೆ ಸೋಕದೆ
ತನ್ನ ವಂಶಕೆ ಬಂದ ಶಾಂತಿಯ ತಾಳ್ದು ಹಿಂಸೆಯ ಬಗೆಯದೆ
ಆಗ ದೊರೆತುದೆ ದೇವನಿತ್ತುದೆ ಮಹತು ಎನ್ನುತ ಕೊಳ್ವುದು.

ನಿಮ್ಮ ಕರೆಯಂ ಕಾಯದೀ ಖಗ ಬಂದು ಅಂಗಳಕೆರಗುತ
ನಿಮ್ಮ ಕರುಣಾಹೃದಯವರಿಯುತ ನಿಂದು ಹೊಸ್ತಿಲಕೆರೆಯುತ
ಬಂದು ಸಂತಸದಿಂದ ಬಾಲವನಲುಗಿಸುತ್ತಲಿ ಹಾಡುತ
ಶುಭವ ನೀಡುತ ಹೋಗಿಬರುವೆನು ಎಂದು ನುಡಿವುದು ಹಾರುತ.

ಕಣ್ಣ ತೆರೆಸುತ ಎದೆಯನರಳಿಸಿ ಅಂತರಂಗವ ಕೆರಳಿಸಿ
ಹಾರಿಹೋಯಿತು ದನಿಯು ಮರುದನಿಗೊಡಲು ಆತ್ಮವು ಚಿಮ್ಮಿತು
ಆವ ಬಣ್ಣವು ಬೆಡಗು ಬಿನ್ನಣ ಚೆಲುವು ನಿಲ್ಲುವ ಭಂಗಿಯು
ಆರಿಗಿಹುದೀ ಭಾವ ವೈರಾಗ್ಯಗಳು ಸುಮ್ಮನೆ ದೊರೆವುವೆ?

ಒಂದು ದನಿಯಲಿ ಹಲವು ದುಃಖದ ಮಬ್ಬು ಮರೆಸುವ ಶಕ್ತಿಯೆ
ಚಪಲ ನೋಟದಿ ಜಗದ ಬಗೆಗಳನಳಿಸಿ ತೋರುವ ಮಾಟವೆ!
ಒಳಗಿನೊಳಗಿನ ಚೇತನವನೆಚ್ಚರಿಸಿ ಸಲಹದೆ ಒಮ್ಮೆಲೆ
ಪಕ್ಷಿಯಿಂಚರದಿಂದ ದೇವರು ತೊಟ್ಟರೇ ಮೌನವ್ರತ.

ಲೋಕದೆಲ್ಲೆಡೆಯಲ್ಲಿ ತನ್ನ ಗಭೀರಮೂರ್ತಿಯ ಹರಿಸುತ
ನಲಿವ ಪೆರ್ಮೆಯದೊಂದು ಆರನು ಲೆಕ್ಕಿಸದ ಬಿಸವಂದವು
ಸಾವು ನೋವಿನ ಬಾಧೆಗಳುಕದೆ ತನ್ಮಯದಿ ಹರಿದಾಡುತ
ಇಂತು ಜೀವನಮೋಕ್ಷವೆಂಬುದ ಸಾರಿ ಲೋಕದಿ ನಡೆವುದು.

# ಕುಳಿರ್ ಮಂಜು

ಉದುರಿಸುತ ಮಣಿ ಮಂಜು। ಮಾದಿ ಮೆಲ್ವಾಸುಗಳ
ನೆಲದ ಹಸುರನು ಮುಚ್ಚಿ।— ಹರದಿ ಬಿಳಿ ಬಣ್ಣಗಳ
ಬಿದೆಯನಾರಿಸಿ ತಣ್ಪು। ನೆರಚಿ ಚಳಿ ಹೊದಿಕೆಗಳ
ಹೊದಿಸಿ ನಡುಗುವ ಕುಳಿರ। ನೂಕುತಿದೆ ಕುರುದಿರುಳ.

ಬೆಟ್ಟಗಳ ನಡುವಿಂದ। ಹರಿದು ಬಹ ಹೊಳೆಯಂತೆ
ಮಂಜಿನೆಳೆ ವಸ್ತ್ರಗಳ। ಹೊದಿಸಿ ಚಳಿ ಮುರಿವಂತೆ
ಆಗಸವೆ ಧರೆಗಿಳಿದು। ಬೆಟ್ಟದಲಿ ನಿಂದಂತೆ
ತೋರುತಿದೆ ಸುತ್ತಲುಂ। ತುಹಿನಗಿರಿ ಬಂದಂತೆ.

ರಸವೇರಿ ಚೆಲುವೆತ್ತು। ಮೈದೋರಿ ಕಾಣುತಿವೆ
ಪೂಗಾಯಿ ಪಣ್ಗಳುಂ। ನುಡಿಗಳಿಗೆ ಸಿಲುಕದಿವೆ
ಸುತ್ತಣ ದಿಗಂತದಲಿ। ಹಿಮದ ರೇಖೆಯ ನಾವೆ
ಮನ ಸೆಳೆದು ಜಗ ಮರೆದು। ಎಲ್ಲೆಲ್ಲು ತೇಲುತಿವೆ.

ಓಡಿಹೋದನು ಚಂದ್ರ। ಹಿಮಗಿರಿಯ ಸೆರೆಯಲ್ಲಿ
ಚಳಿಯ ಹೊದಿಕೆಯ ಸೂರ್ಯ। ಝುಳನೀಗಿ ಹಗಲಲ್ಲಿ
ಕುಳಿರ ಕುಣಿತಕೆ ಸೋತು। ಪಣ್ಪೆರಿಯೆ ಮರದಲ್ಲಿ
ಮೈಯುರುಬಿ ನುಡಿಯುತಿವೆ। ಗಿಳಿವಿಂಡು ಮರೆಯಲ್ಲಿ.

ಎಳೆಯ ಹರೆಯದ ವೃದ್ಧ।ರೆಲ್ಲರುಂ ಗಡಗಡನೆ
ನಡುಗುತ್ತ ಬೆನ್ ಬಾಗಿ। ಮೈ ಕುಗ್ಗಿ ಬರುತೊಡನೆ
ಕುಳಿರು ಬರುತಿರೆ ಸಾಗಿ। ಸೂರ್ಯನೆಲ್ಲೆನುತೊಡನೆ
ಉರಿಗೆ ನೀರೆರೆದಂತೆ। ಸಹಿಸದೆಯೆ ಬಲು ಬೇನೆ.

ಕಾಯ್ಗಟ್ಟಿ ಮೈಯೆಲ್ಲ। ಹುರಿಗಟ್ಟಿ ನವಿರೆಲ್ಲ
ಹಿಮ ತಣ್ಪು ಒಳಗೇರೆ। ರಕುತಮುಂ ಹೊರಟೆಲ್ಲಿ
ಕುಳಿರ ಚೆಲುವಂ ನೋಡೆ। ಮೈಯೊಡೆವ ತೆರನೆಲ್ಲ
ಕೋಪಗೊಂಡಿವ ಹಸಿದು। ನಿಮಿರಿ ರೋಮಗಳೆಲ್ಲ.

# ಶ್ರೀ"ಯವರನ್ನು ನೆನೆದು

ಬೆಳ್ಳೂರು ಮೈಲಾರ ಶ್ರೀಕಂಠನಡಿದೆಗೆದು
ಸಾಲ್ಗುವಿಾ ತಿರೆಯಲ್ಲಿ ಪಾಡಿದುದು ನೋಡಿದುದು
ಇಂದ್ರಸಭೆಯೊಳು ನಮ್ಮ ತಾಯ ಕೀರ್ತಿಯ ಹಾಡಿ
ಕನ್ನಡ ಧ್ವಜಕೀರ್ತಿಯಲ್ಲಿ ನರ್ತನ ಮಾಡಿ
ಸಾಹಿತ್ಯ ಸೊಬಗುಗಳನೆಲ್ಲರ್ಗೆ ತೋರುವೊಡೆ
ಎಲ್ಲರೊಳು ತಾ ಹೊಕ್ಕ ಹೃದಯದಲಿ ನಲಿದಾಡೆ.

ಪಂಪ ರನ್ನರ ಬಸವ ಲಕ್ಷ್ಮೀಶ ಹರಿಹರರ
ವರಕುಮಾರವ್ಯಾಸ ರಾಘವ ಪುರಂದರರ
ಕವಿಗಳಾಡುಂಬೊಲದಿ ಸರಸ ಗೋಷ್ಠಿಯೊಳೊಲಿದು
ಕನ್ನಡದ ಕೆಚ್ಚಾಳುಗಳ ನಡೆಸಿ ತಾ ನಲಿದು
ಕನ್ನಡಾಂಬೆಯ ಪೆರ್ಮೆ ಕೂರ್ಮೆಗಳ ನೆನೆನೆನೆದು
ನುಡಿವನದಕೋ ನಮ್ಮ ಶ್ರೀ ಕವೀಂದ್ರಂ ನಿಂದು.

ನಲಿನಲಿದು ಸಾಹಿತ್ಯದಧಿದೇವಿ ದರ್ಶನದಿ
ಒಲಿಸಿ ನಲ್ನುಡಿಯಿಂದ ತಾಯ ತೊಡೆಯಲಿ ಮುದದಿ
ಮಂಡಿಸುತಲೊರೆಸಿರ್ದ ತಾಯ್ಕೊರಗ ಮರೆಸಿರ್ದ
ವೆತೆಗಳಂ ತೊರೆಯಿಸುತ ಮತ್ತೊಮ್ಮೆ ನಗಿಸಿರ್ದ
ಕನ್ನಡದ ತಾಯ್ನೋಟಮನ್ನೊರೆದು ಸೊಗಸಿರ್ದ
ಬಿಜಗೆಯ್ಸಿ ದೇವಿಯಂ ಕೀರ್ತಿಯಂ ಪಾಡಿರ್ದ.

ತನ್ನಂತೆ ತರುಣರಂ ಕಿರಿಯರಂ ಹಿರಿಯರಂ
ಕನ್ನಡದ ನುಡಿಸೇವೆಯಲಿ ನಡೆಸಿ ಅಣಿಯರಂ
ಧರ್ಮದಲಿ ಕರ್ಮದಲಿ ತ್ಯಾಗದಲಿ ಭೋಗದಲಿ

ತೋರಿಸಿದ ಕರ್ಣಾಟ ಕವಿತಿಲಕ ನಡೆಗಳಲಿ
ಅಗಲಿರ್ದ ಕಣ್ಣೀರ ಹೊಳೆಹರಿಸಿ ಮತಿ ಮರಸಿ
ನಮ್ಮೆಲ್ಲರೊಲವೊಯ್ದು ಮರೆಯಾದನತಿ ಸರಸಿ.

ಎಲ್ಲಿರಲಿ ಎಂತಿರಲಿ ಅವರ ನಡೆನುಡಿ ಮನವು
ಗಾಂಭೀರ್ಯ ರಸಜೀವ ನಗು ಹಾಸ್ಯ ಚೆಲುವೊಲವು
ಭೀಷ್ಮರಾ ಹಿರಿತನವ ತಳೆದು ತಾ ಹೊಳೆದಿಹರು.
ಸರ್ವರನು ನಡೆಯಿಸುತ ಮಾರ್ಗದಲಿ – ಮೆರೆದಿಹರು
ಕರ್ಣಾಟ ಕಣ್ಕೋಟ ತಣ್ಕೋಟಮಂ ಕಂಡು
ಶ್ರೀಯೊಲಿಯೆ ಎಚ್ಚರಾದುದು ನಮಗೆ ಸವಿಯುಂಡು.

# ಹಾರಿಬಂತೊಂದು ಹಕ್ಕಿ

ಹಾರಿಬಂತೊಂದು ಹಕ್ಕಿ
ಸಂಜೆಯಲಿ ಮೈದಪ್ಪಿ ಒಳಗೆ
ಹಾರಿಬಂತೊಂದು ಹಕ್ಕಿ.

ಹೊರ ಹೋಗಲರಿಯದೆ
ತನ್ನವರ ಕಾಣದೆ
ಬಂದ ಬಗೆಯರಿಯದೆ
ಅತ್ತಿತ್ತ ನೋಡುತಿದೆ
ಭಯದಿಂದ ನಡುಗುತಿದೆ.

ಇವರಾರೊ ಹೊಸಬರು
ತನ್ನನಿವರರಿಯರು
ಮೊದಲಿವರು ಕಾಣರು
ಬಂಧನದಿ ಬದುಕುವರು
ತನ್ನ ಸೆರೆಗೊಯ್ಯುವರು.

ಎಂದೊ ಬಂದಂತಿಹುದು
ನೆನಪಾಗಲೊಲ್ಲದು
ಎಂದೊ ಕಂಡಂತಿಹುದು
ಕುರುಪಾಗಲೊಲ್ಲದು
ಎಂದೊ ಇದ್ದಂತಿಹುದು.

ಪಂಜರದೊಳಿರಿಸಿದರು
ಮಾತುಗಳ ಕಲಿಸಿದರು

ಹಿಂದಿನದ ಮರೆಸಿದರು
ಇವರೆ ನನ್ನವರೆಂಬ—
ಕಕ್ಕುಲಿತೆ ತೋರಿದರು.

ಇಂತು ದಿನ ಕಳೆಯುತಿರೆ
ತನ್ನಂಥ ಹಕ್ಕಿಗಳು
ಬಂದಿರದೆ ಸಾರುತಿರೆ
ಏನಿದೇತೆರನೆಂಬ
ಗೊಂದಲವು ಮೂಡುತಿರೆ—

ಒಳಗೊಳಗೆ ದನಿಯೊಂದು
ಹೇಳುತಿದೆ ನೋಡೆಂದು
ಎಲ್ಲಿಂದಲೋ ಬಂದು
ಇಂದಿಲ್ಲಿ ನೀ ನಿಂದು
ಕಳೆದಾಯ್ತು ದಿನವೆಂದು.

ಅನಾದಿ ಪುರುಷನ ಕಿಡಿ
ಈ ರೂಪ ತಾಳಿಹುದು
ದೇವನಾಡಿದ ನುಡಿ
ಈ ಕಾರ್ಯವೆಸಗಿಹುದು
ನಡೆ ಮುಂದೆ ಇಡುತಲದಿ.

# ಮಹಾತ್ಮರಿಗೆ

ಒಡೆದು ಕರ್ಮದ ಕಟ್ಟು — ಜಗದ ಮೋಹವ ಸುಟ್ಟು
ಪಡೆದು ಸತ್ಯದ ದೃಷ್ಟಿ — ಜನಕೆ ತಿಳಿವನು ಕೊಟ್ಟು
ಜಡ ಶರೀರದ ಮಮತೆ — ಕಾಮ ಮದಗಳ ಬಿಟ್ಟು
ನುಡಿ ನುಡಿಗಹಿಂಸೆಯನು — ಬೋಧಿಸುವೆ ಕೃಪೆಯಿಟ್ಟು.

ಎಲ್ಲ ಹೃದಯವ ಹೊಕ್ಕು — ಅಳೆದು ಜನುಮಗಳನ್ನು
ಎಲ್ಲ ಶೂಲೆಯನರಿದು — ಎರೆದು ಓಷಧಿಗಳನು
ಎಲ್ಲ ಹಿಂಸೆಯ ತೊಡೆದು — ಮುರಿದು ದುರ್ಗುಣಗಳನು
ಸೊಲ್ಲು ಸೊಲ್ಲಿಗೆ ಸತ್ಯ — ಕಾಣಿಸುವ ಗುರು ಶರಣು.

ನೀನು ನಡೆದುದೆ ಧರ್ಮ — ನೀನು ನುಡಿದುದೆ ಸತ್ಯ.
ನೀನಹಂಕಾರಗಳ — ಮೋಹ ರೋಷದ ಮಿಥ್ಯ
ಮಾನಾಭಿಮಾನಗಳ — ಹಾಯ್ದು ಕಂಡಿಹೆ ಸತ್ಯ.
ನೀನು ಪ್ರೇಮದ ಮೂರ್ತಿ — ಜಾಗ್ರತನು ನೀ ನಿತ್ಯ.

ಕೃಷ್ಣನಾಡಿತಮೆಲ್ಲ — ಹಾಸುಹೊಕ್ಕಾಗಿಹುದು
ಕೃಷ್ಣ ನೀನಾಗಿರಲು — ವಿಜಯರಾವಹುದಹುದು
ಈ ಕುರುಕ್ಷೇತ್ರದಲಿ — ನೀನು ಸಾರಥಿಯಾಗಿ
ಲೋಕ ರಕ್ಷಿಸು ಗಾಂಧಿ — ಸನ್ಮಹಾತ್ಮನೆ ಸಾಗಿ.

ಸತ್ವರಜತಮಗುಣವ — ಹಸುರು ಬಿಳಿ ಕೆಂಪುಗಳ
ನಿತ್ಯಕೇತನವೆತ್ತಿ — ಸ್ನೇಹದಿಂ ಲೋಕಗಳ
ಅತ್ಯಧಿಕ ವಾತ್ಸಲ್ಯ — ಅಭಯ ವಿಶ್ವಾಸಗಳ
ಸ್ತುತ್ಯ ಮೂರುತಿ ಶರಣು — ನೆನೆವೆ ನಿನ್ನಂಘ್ರಿಗಳ.

ಹತ್ತು ದಿಕ್ಕುಗಳಲ್ಲಿ — ಕರುಣವಾಹಿನಿ ಹರಿಸಿ
ಮತ್ತೆ ಬಿಂಬಿಸಿ ನಿನ್ನ — ನೆಲ್ಲ ಹೃದಯದೊಳಿರಿಸಿ
ಓ ಹಸನ್ಮುಖಿ ಬಾರ — ಶಾಂತಿ ಲೋಕದಿ ಸುರಿಸಿ
ಶ್ರೀಹಸಾದವ ನೀಡು — ಓ ಮಹಾತ್ಮನೆ ಹರಸಿ —

ವಾಣಿಯಲಿ ಶ್ರೀರಾಮ — ರಾಮಚಂದ್ರನನಾಮ
ಕ್ಷೋಣಿಯಲಿ ರಘುರಾಮ — ನಾಮ ಪಾವನನಾಮ
ಸಕಲಕೆಲ್ಲಕು ಮರ್ದು — ರಾಂ — ರಹೀಮರನಾಮ
ನಿಖಿಳದೇವರ ನಿಜವ — ನೊರೆವ ಸಾಧು ಸನಾಮ.

ನಿನ್ನ ಬಾಳೀ ಜಗದ — ರಕ್ಷಣೆಗೆ ಮುಡುಪಾಯ್ತು
ಸನ್ನುತನೆ ಭಾರತಿಯ — ಬಿಡುಗಡೆಗೆ ಎಡೆಯಾಯ್ತು
ಉನ್ನತಾಮಲ ಕೀರ್ತಿ — ಮಾನಿನಿಗೆ ಚಿರವಾಯ್ತು.
ಮುನ್ನ ಸ್ವಾತಂತ್ರ್ಯಕ್ಕೆ — ಸುಸ್ಥಿರದ ಜಯವಾಯ್ತು.

ಲೋಕವೇ ನಿನದಾಯ್ತು — ನೀನು ಸರ್ವರೊಳಿರಲು
ಶ್ರೀಕರಾಂಘ್ರಿಯ ರೇಣು — ಎಮ್ಮ ಶಿರದೊಳಗಿರಲು
ಸಾಕು ನಿನ್ನ ಸ್ಮರಣೆ — ಸಕಲರನ್ನೆಬ್ಬಿಸಲು
ಶೋಕವಳಿವುದು ದೇವ — ನಿನ್ನ ಕೃಪೆಯೊಂದಿರಲು.

# ಜವಾಹರಲಾಲ ನೆಹರೂ

ಮೋತಿಲಾಲ್ ಕೈಮುತ್ತು ಭಾರತಿಯ ಪದಕಿತ್ತು
ಸ್ವಾತಂತ್ರ್ಯದೊಡವೆಯುಂ ಮಾಡಿ ತೇಜಮನಿತ್ತು
ಪೋದನಾ ಸಾಹಸಿಗ ಸಗ್ಗಮಂ ಸಾರಿರ್ದ
ಸಾಧಿಸಿದ ರಾಜ್ಯಮಂ ಕೆಚ್ಚಾಳು ಕೊನೆಗರ್ದ
ಸತ್ಯಾಸಿಧಾರೆಯಿಂ ಧರ್ಮಕವಚವನುಟ್ಟು
ಭಾರತಿಯ ಬಿಡುಗಡೆಗೆ ವೀರಪಣವುಂ ತೊಟ್ಟು
ಧಾವಿಸಿದ ವೀರನದೊ ಸಿಂಹನಾದಂ ಗೆಯ್ದು
ಪಾವನದಹಿಂಸೆಯಿಂ ಜಯಸಿರ್ದ ಭುಜಹೊಯ್ದು.

ಭಾರತಿಯ ವಿಜಯದಲಿ ಮೆರೆಯಿಸುತ ಸಿಂಗರಿಸಿ
ಯೋಧನುಂ ತಾನಾಗಿ ಲೋಕಮನ್ನೇ ನಗಿಸಿ
ಇದಿರಿಸುವ ಶತ್ರುಗಳನೊಲುಮೆಯಿಂದಲೆ ಗೆಲಿದು
ಒದವಿರುವ ಕಷ್ಟಗಳ ಬಗೆಹಾಯ್ದು ಮುಂದರಿದು
ನಲವತ್ತು ಕೋಟಿ ಜನನಾಯಕಂ ತಾನೊದವಿ
ತೊಳಗುತಿಹನಾ ಜವಾಹರಲಾಲನೆಹರುರವಿ.

# ಹೊಸ ಬಾಳ ಬೆಳಕು

(೧೫-೮-೪೭)

ಆ ಮಹಾತ್ಮರ ತಪವೊ ಭಕ್ತಿಭಾವದ ಗುಣವೊ
ಭಾರತಿಯ ಕಣ್ಣೀರೊ ಉಳಿದವರ ಹಸಿವೊ
ಜವಾಹರ ವಲ್ಲಭರ ರಾಜೇಂದ್ರ ಮೌಲನರ
ನಿರುತ ಪೌರುಷವೆನಲು ಬಂದುದೀ ಬೆಳಕು.

ನಿರುತ ತಾರುಣ್ಯದಲಿ ರಂಜಿಸುವ ಭಾರತಿಯು
ಪರತಂತ್ರ ಬಂಧನದಿ ಮುದುಕಿಯಂತಾಗಿ
ಇನ್ನೊಮ್ಮೆ ಸೆರೆಮನೆಯನೊಡೆದು ಹೊರ ತಾ ಬಂದು
ನೋಡುವಳು ಎಮ್ಮನ್ನು ಬಾಷ್ಪವನೆ ತುಂಬಿ.

ಕುಂಕುಮವ ತಳೆದಿಂದೆ ಮುತ್ತೈದೆತನದಿಂದ
ಆ ಮೊದಲ ತಾರುಣ್ಯ—ಲಾವಣ್ಯವೆಸೆಯೆ
ತಾಯಿ ನೋಡುವಳಿತ್ತ ನಗುಮೊಗದಿ ಕೃಪೆ ಬೀರಿ
ಎದೆಯುರಳಿ ಕರೆಯುವಳು—ಅಡಿಗೆರಗಿ ನಮಿಸಿ—

ಪರದಾಸ್ಯಶೃಂಖಲೆಯ ಮುರಿದು ಬಂದಿಹಳೀಚೆ
ಎಲ್ಲ ಭಯಗಳ ತಳ್ಳಿ ಘಡ ನೂಕುತಾಚೆ
ಸ್ವಾತಂತ್ರ್ಯ ಬಾವುಟವ ಮೇಲೇರಿಸುವಳದಕೊ
ನಿರ್ಮಲಿನ ತೇಜದಲಿ ಬಹ ಭಂಗಿಯದಕೊ.

ಸೇತುವೆಯುಲಾ ಪಾದ ವಿಂಧ್ಯವೇ ತಾಯ್ನಡುವು
ತುಹಿನಗಿರಿ ಮಣಿಮುಕುಟ ನಮ್ಮ ತಾಯ್ಗೆ
ಎಡ ಬಲಕೆ ಕೈ ನೀಡಿ ಮಕ್ಕಳನು ಹರಸುವಳು
ಆ ನಿಲುವ ನೋಡುತೀ ದರ್ಶನವ ಮಾಡಿ.

ಹೆತ್ತ ಭೂಮಿಯ ಪುಣ್ಯ ಬೆಳೆದ ಮಣ್ಣಿನ ಧರ್ಮ
ಸೂರ್ಯ-ಚಂದ್ರರ ಸತ್ಯ ಭಾರತಿಯ ತಪವು.
ನಮಗೆ ಬೆಳಕಾಯ್ತಿಂದು ನಮ್ಮ ನೆನಪಾಯ್ತೆಮಗೆ
ಎಲ್ಲಿ ನೋಡಿದರಲ್ಲಿ ತಾಯ ಪ್ರತಿಬಿಂಬ.

ಹಲವು [illegible]ಲದ ತಪದಿ ಬೆಂದು ನೊಂದಿಹ ಕರುಳು
ತನ್ನ ಮಕ್ಕಳು ಕಳೆದ ನೆಲೆಯ ನೆನೆಯುವಳು
ವೀರ ಧರ್ಮಾಸನದಿ ಪರರೇರಿ ನಲಿಯುತಿರೆ
ಕೈದುಗಳ ಕೆಳಗಿರಿಸಿ ಕಂದಿದಳು ಚದುರೆ.

ಹಾರುತಿದೆ ತಾಯ್ನೆರಗು ಮೇಲೇರಿ ಧ್ವಜವಾಗಿ
ಅದೊ ಕೆಂಪು – ಬಿಳಿ – ಹಸುರು – ಮಧ್ಯೆ ವರ ಚಕ್ರ
ಆಗಸದಿ ಮೊಗದೋರಿ ಇನ್ನೊಮ್ಮೆ ಕೆಳಗಿಳಿಯೆ
ನೆಂದೊರೆವ ತೆರದಿಂದ ಅಭಯ ತೋರುತಿದೆ.

ಮೈತ್ರಿಯಲಿಬೀಳ್ಕೊಟ್ಟುಆಂಗ್ಲರಂ ಕಳುಹುವಳು
ತೊಡೆಯ ಸಿಂಹಾಸನದಿ ಮಕ್ಕಳನು ನಿಲಿಸಿ–
ತಾಯಿಯನಲಂಕರಿಸಿ ಶಾಂತಿಯಂ ಪೊಂದುತಲಿ
ಜೈವುಘೋಯೆನುತವರು ನಡೆಯುತಿಹರದಕೊ.–

ಸ್ವಾತಂತ್ರ್ಯಗೀತವನು ಹಾಡುತಲಿ ಭೂಮಾತೆ
ಭಾರತಿಯ ಹರಸುವಳು ನಗುಮೊಗದಿ ಬಂದು.
ಹತ್ತು ದಿಕ್ಕಿನ ಗಾಳಿ ಹಾಡುತಿದೆ ಕೀರ್ತಿಯನು
ಭರತ ಮಾತೆಯ ಪಾದರಜವಿರಿಸಿ ಪಣೆಗೆ.–

# ಮಹಾತ್ಮರು

## ೧. ಚರಮ ಗೀತೆ

ಜಗದಿ ಕತ್ತಲು ಮುಸುಕಿ ಮುಂದರಿಯದಾಯ್ತಿಂದು
ನಡೆಯಿಸುವ ತಂದೆ ನೀ ಮರೆಯಾಗೆ ನಮ್ಮಿಂದ
ನಾವು ತಬ್ಬಲಿಯಾಗಿ ಬಾಳಲಿಂತಿನ್ನಕಟ !
ಜೀವಾತ್ಮ ತೊಲಗಿರುವ ದೇಹದಂತೆ !

ಗಾಂಧಿಗುಂ ಜರೆಯುಂಟೆ-ಮೃತಿಯುಂಟೆ-ಅಳಿವುಂಟೆ
ಎಂದೆಮ್ಮನಾಶ್ಚರ್ಯಗೊಳಿಸಿ ನೀನೊಮ್ಮೆಗೇ
ಮೂಗುವಡಿಸೀ ಜಗವ ಪಯಣಗೈವರೆ ತಾತ
ಸ್ವಾತಂತ್ರ್ಯ ಸಂಗ್ರಾಮದೇಕವೀರ ! !

ಹೃದಯ ಬರಡಾಯ್ತುಮವು ಶೂನ್ಯಮಾಯ್ತಾ ಲೋಕ
ತುಂಬಿದೀ ಭರತಪದ ಬರಿದಾಯ್ತು ಬದುಕುಳಿದು
ಭಾರತಿಯ ನಡುನೀರಿನಲಿ ಬಿಟ್ಟು ನಡೆವರೇ
ಓ ಮಹಾತ್ಮನೆ ಜ್ಯೋತಿಯಾರಿಸುವರೆ ! !

ಭಾರತಿಯ ಹಿರಿದೆನಿಸಿ ನಲಿಸುವವರಾರಿನ್ನು
ಮೆರೆದಹಿಂಸಾವ್ರತದಿ ಬೆಳಕಿತ್ತ ಭಾಸ್ಕರನೆ
ಅಸ್ತಮಿಸುತೆಲ್ಲಿರುವೆ ಪುಣ್ಯಮೂರುತಿ ನಿನ್ನ
ದಿವ್ಯ ದರ್ಶನವಿತ್ತು ಮುಗುಳುನಗೆಯ ! !

ನೊಂದು ಬೆಂದಿತು ಹೃದಯ ಶೋಕವೊಂದೇ ತುಂಬಿ
ದುಃಖಸಾಗರಮಾಯ್ತು ಭರತಭೂಮಿಯ ನೆಲವು
ಭಕ್ತಪದ ಸಮ್ರಾಟ ನುಡಿ ಬಾರೆಲೈ ತಂದೆ,
ಕಣ್ಣೀರಿನಿಂದೊರೆವೆ ಚರಮ ಗೀತೆ !

## ೨. ಜಗಜ್ಜನಕ ಗಾಂಧಿಜೀ

ಭರತರಾಷ್ಟ್ರದ ಜನಕ ಗುರುವರ । ದೇವನನುಪಮ ಯೋಗಿಯೆ
ಸರುವ ಹೃದಯುವ ಹೊಕ್ಕು ಸತ್ಯದ । ಮರ್ಮವರುಹಿದ ತ್ಯಾಗಿಯೆ
ಹಿರಿಯ ಸ್ವಾತಂತ್ರ್ಯವನು ಬೋಧಿಸಿ । ಮನವನರಳಿಸಿ ಕೆರಳಿಸಿ
ಧರುಮದರ್ಥವ ತಿಳುಹಿ ಮತಗಳ । ನೊಂದು ಮಾಡಿದ ಮಹಋಷಿ.

ವಿನಯ ಸತ್ಯ ಪ್ರೇಮ ಸಹನ । ತ್ಯಾಗಮೌದಾರ್ಯಂಗಳ
ಘನತೆ ಪೌರುಷ ಧೃತಿ ವಿವೇಕ ವಿ । ಚಾರ ನಿರ್ಮಲ ಗುಣಗಳ
ಮುನಿ ವಿರಾಜಿತ ಮನ ಸುಶೋಭಿತ । ಯೋಗಿ ಹೃದಯುದ ನಗೆಗಳ
ವನಧಿ ಗಾಂಧಿಮಹಾತ್ಮ ನಿನ್ನನು । ತಿಳಿವರಾರೀ ಬಗೆಗಳ.

ಜೀವಕೆಲ್ಲಕೆ ಕೊಟ್ಟು ಚೇತನ । ಸಕಲ ಹೃದಯವ ಸೇರಿದೆ
ನೋವನೊಪ್ಪಿದೆ ಸಾವನಪ್ಪಿದೆ । ಜಡ ಶರೀರವ ತೂರಿದೆ.
ಭಾವಿತಾತ್ಮನೆ ಬಂದ ಭೂಮಿ ಪ । ವಿತ್ರಮಾಯ್ತು ತ್ಯಾಗದೆ
ಆವ ಘನತೆಯ ಮಹಿಮೆಯಿಂದಲಿ । ನಿನ್ನ ಪಡೆದೆವೊ ಪುಣ್ಯದೆ.

ಲೋಕ ವೈಭವ ನಿನ್ನ ಸುಸ್ವಾ । ಗತಿಸಿ ಕರೆದರೆ ನೋಡದೆ
ಸಾಕು ಹರಿಜನ ಸೇವೆಯೆಂದೇ । ಉಸಿರು ಮೀಸಲು ಮಾಡಿದೆ.
ಬೇಕು ಮನಸಾ ವಾಚ ಕರ್ಮದೊ । ಳೊಂದೆ ಕೃತಿ ಧೃತಿಯೆನ್ನುತೆ
ಏಕಕಂಠದೊಳೊರೆದೆ ಶ್ರದ್ಧಾ । ಸಹನೆ ಪಾವನಮೆನ್ನುತೆ.

ನೀರು – ನೆಲವಾಕಾಶ – ಗಾಳಿಯು । ನಿರುತ ಪಾವನವಾದುದು
ಶೌರ್ಯ ಶಮೆ ದಮೆ ತಪಸು ಶೌಚಾ । ಚಾರ ಜ್ಯೋತಿಯ ಪಡೆದುದು
ಆರು ಬಳಗಂ ನಿನ್ನದಾವುದು । ಎಲ್ಲ ಲೋಕವ ಸೇರ್ದುದು !
ಆರು ನಿನ್ನವರಲ್ಲ ಧರೆಯಲಿ ? । ನಿನ್ನದಲ್ಲದದಾವುದು ?

ಸಿರಿ ಸರಸ್ವತಿ ಶಕ್ತಿ ನಿನಗೊಲಿ । ದಿಹರು ತಾವ್ನಲಿಯುತ್ತಲಿ
ಹರಿಹರಾದಿ ವಿರಿಂಚಿ ಧರ್ಮರು । ಹರಸುತೊಲಿವರು ಮುದದಲಿ

ವರ ಕುಬೇರನು ತೊತ್ತು ಶಕ್ರನು। ವಿಭವ ತೊರೆದನು ಒಲ್ಲದೆ
ಚರಣಸೇವೆಯ ಮಾಡಿ ನಿಂದರು। ಎಲ್ಲ ಜನಪದಮೂಲದೆ.

ಜಗದ ಹಿತವಂ ಬಗೆದು ನಿನ್ನನೆ। ಮರೆತೆ ಗುಂಡಿಗೆ ನೀಗಿದೆ
ಒಗೆದು ನಶ್ವರದೇಹ ಸೂಕ್ಷ್ಮದಿ। ಎಲ್ಲ ಹೃದಯವ ಸೇರಿದೆ.
ಭಾರತಿಗೆ ನವಜನ್ಮವೀಯುತ। ಸುಪ್ರಕಾಶದಿ ಬೆಳಗಿದೆ.
ಆರತಿಯನೆತ್ತುತಲಿ ಕಣ್ಮರೆ। ಯಾದೆ ಪೂರಣಗೊಳಿಸದೆ.

ಎಲ್ಲ ಜಗವಂ ಸೆಳೆದು ಸಮ್ರಾಟ್। ಮಕುಟ ತಾಳಿದೆ ಕಾಣವೆ
ಒಲ್ಲೆನೆಂದರು ಬಿಡದು ನಿನ್ನಂ। ಲೋಕ ಮೆಚ್ಚಿಹ ಪ್ರೇಮದೆ
ರಾಜತಂತ್ರ ವಿವೇಕ ಪರಮಾ। ರ್ಥಗಳು ಭಕ್ತಿ ವಿರಾಗವು
ರಾಜಿಸುತ್ತಿವೆ ಸುಪ್ರಕಾಶದಿ। ನಿನ್ನ ಹೃದಯವ ನೀಗವು.

ಧರೆಯ ಧನ್ವಂತರಿಯೆ ನೀನೆ।ಲ್ಲಿರಲು ನಮ್ಮನು ನೋಳ್ಪುದು
ಕರೆದು ಕೃಪೆಯಂ ಪೊರೆ ಜಗತ್ತನು। ಅಭಯಹಸ್ತವ ತೋರ್ಪುದು.
ಹಿರಿಯ ನೀನವತಾರ ಪುರುಷಂ। ಎಂದು ಲೋಕವೆ ಪೇಳ್ವುದು
ಇರಲಿ ನಿನ್ನೀ ಸ್ಮರಣೆ ಸಂತತ। ಎಲ್ಲರೊಳು ಸಮಭಾವದಿ.

೩೦-೧-೧೯೪೮



5

# ಆರತಿ

ಪಣೆಗೆ ಕುಂಕುಮವಿಟ್ಟು ಪೂರ್ವ ನಾರಿಯು ನಿಂದು
ಕಣ್ಣುಗಳಿಂದವೆ ಕರೆದು ಕಮಲಿನಿಯ ಬಳಿಸಂದು
ಮಣಿಕಿರೀಟವ ಧರಿಸಿ ಮನಕೆ ಮಿತ್ರನ ತಂದು
ಇಣಿಕಿ ನೋಡುತಲಿಹಳು ರಮಣ ಬರುತಿಹನೆಂದು.

ಹೊಳೆವ ದೀವಿಗೆಯಿಟ್ಟು ಮಂಗಳಾರತಿ ಪಿಡಿದು
ಅಳಿಯ ರಾಗದಿ ಹಾಡಿ ಹಕ್ಕಿಯೆದೆಯಿಂಚರದೆ
ತಳಿರ ಚಾಮರವೀಸಿ ತಣ್ಣೆಲರನುರೆ ಹಾಸಿ
ಬಳಿಗೆ ಬಾಬಾಯೆಂದು ಕರೆಯುವಳು ಕೈವೀಸಿ.

ಪೂರ್ವ ಶರಧಿಯ ಸೀಳಿ ದಿವ್ಯ ಸಿಂಗರದಿಂದ
ಪಾರ್ವ ರವಿರಥ ತುರಗಮಿದಿರಾಗೆ ಸೊಗದಿಂದ
ಆರತಿಯನೆತ್ತಿದಳು ಮುಂಬರಿಯುತಪ್ಪಿದಳು
ಧಾರುಣಿಗೆ ರವಿ ಬರವ ತಾ ನಿಂದು ಸಾರಿದಳು.

ತನ್ನ ಗರ್ಭದಿ ಬಂದ ಸೂರ್ಯನಂ ವಂದಿಸುತ
ಇನ್ನು ಶುಭ ನಿನಗಾಗಲೆನ್ನುತ್ತ ಹರಸುತ್ತ
ಮುನ್ನೀರ ಕಳುಹಿದಂ ಮೇಲೆಯ್ದಿ ವರ್ಧಿಸುತ
ಉನ್ನತಾಕಾಶದಲಿ ನಡೆದಿಹನು ಬೆಳೆಯುತ್ತ.

ಅಮೃತಮಯ ರುಚಿರಶ್ಮಿಂ ಬುವಿಗೆ ಜೀವವನಿತ್ತು
ಗಮನಿಸದೆ ಅವರಿವರ ಕಣ್ಣಾದ ಕಳೆಯಿತ್ತು
ಕರ್ಮವೇ ಮಿಗಿಲೆಂದು ತೋರಿ ಲೋಕವ ನಡೆಸಿ
ನಿರ್ಮಲಂ ಬೆಳಗಿದನು ಪೂರ್ವಮಾನಿನಿವೆರಸಿ.

## ಶ್ರೀ॥ ಅನಂತಪದ್ಮನಾಭರಾಯರ
## ಇತರ ಪುಸ್ತಕಗಳು

---

ಶ್ರೀ ಕಾವೇರಿ ಕಥಾಮೃತಂ

ಎರಡು ಕುಸುಮಗಳು

ಶ್ರೀ ರಾಮಕೃಷ್ಣ ಪರಮಹಂಸರು
(ಮುಗಿದುಹೋಗಿವೆ)

ದೇವಸ್ಮಾಜಿ (ನಾಟಕ) — ಅಚ್ಚಿನಲ್ಲಿ

ಕರ್ಣಾಟಕ ತುಲಸೀದಾಸ ರಾಮಾಯಣ